ಬೆಂಗಳೂರಿನ 'ಶಾಕ್ಯ ಸಾಹಿತ್ಯ ಮಂಟಪ'ದ ಪ್ರಕಟಣೆ

# ೨೮ ಕತೆ–೧೪ ಚಿತ್ರ

[ಪುಟ ೧೨ + ೮೪]

ಜಿ. ಪಿ. ರಾಜರತ್ನಂ
ಪಾಲಿಯಿಂದ ಕನ್ನಡಿಸಿದುದು



ಮನೋಹರ ಗ್ರಂಥಪ್ರಕಾಶನ ಸಮಿತಿ
ಧಾರವಾಡ

ಮೈಸೂರು ಸಂಸ್ಥಾನದ

ಶ್ರೀಮನ್ ಮಹಾರಾಜರವರಾದ

## ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್

ಜಿ.ಸಿ.ಎಸ್.ಐ., ಜಿ.ಬಿ ಇ., ಮಹಾಸ್ವಾಮಿಯವರಿಗೆ

ಈ ಗ್ರಂಥವನ್ನು ಭಕ್ತಿಯಿಂದ

ಅಪ್ಪಣೆ ಪಡೆದು

ಒಪ್ಪಿಸಿದೆ

## ಜಿ. ಪಿ. ರಾಜರತ್ನಂ ಅವರ ಪುಸ್ತಕಗಳು

ತುತ್ತೂರಿ, ಕಡಲೆ ಪುರಿ, ಚುಟಕ, ಗುಲಗಂಜಿ, ಕಲ್ಲುಸಕ್ಕರೆ,
ಶ್ರೀ ರಾಮಚಂದ್ರ, ಗೌತಮ ಬುದ್ಧ,
ಶ್ರೀ ಹರ್ಷ, ಅಶೋಕ ಮೌರ್ಯ.

---

ಹನಿಗಳು, ಬೆಳುದಿಂಗಳು, ಶಾಂತಿ, ರತ್ನನ ಪದಗಳು,
ಗಂಡುಗೊಡಲಿ, ರತ್ನನ ದೋಸ್ತಿರತ್ನ, ಹತ್ತುವರುಷ,
ಮಹಾಕವಿ ಪುರುಷಸರಸ್ವತಿ.

---

ಚೀಣಾದೇಶದ ಬೌದ್ಧಯಾತ್ರಿಕರು, ಧರ್ಮದಾನಿ ಬುದ್ಧ,
ಬುದ್ಧವಚನ ಪರಿಚಯ, ಮಿಲಿಂದಪ್ರಶ್ನೆ,
ಮೂರು ಪಾಲಿ ಸೂತ್ರಗಳು, ಪಾಲಿ ಪಜ್ಜ ಪುಪ್ಫಂಜಲಿ,
ಬುದ್ಧನ ಕತೆಗಳು.

---

ಮಹಾವೀರನ ಮಾತುಕತೆ, ಭಗವಾನ್ ಮಹಾವೀರ,
ಶ್ರೀ ಗೋಮಟೇಶ್ವರ, ಶ್ರೀ ಪಾರ್ಶ್ವನಾಥ.

---

**ಸಂಪಾದಿಸಿದುವು**

ಕಂದನ ಕಾವ್ಯಮಾಲೆ, ಕೆನೆಹಾಲು, ನಮ್ಮನಮ್ಮವರು,
ವೈಶಾಖ ಶುಕ್ಲ ಪೂರ್ಣಿಮಾ.

# ಬಿನ್ನಹ

"ಲೋಕಪೂಜ್ಯನಾದ ಭಗವಂತ ಗೌತಮಬುದ್ಧನು ತೊಟ್ಟನೆ ಸಮ್ಯಕ್‌ಸಂಬುದ್ಧನಾಗಲಿಲ್ಲ. ತಾನು ಬುದ್ಧನಾಗುವುದಕ್ಕೆ ಅನೇಕ ಕಲ್ಪಗಳ ಹಿಂದೆ, ದೀಪಂಕರನೆಂಬ ಬುದ್ಧನ ಕಾಲದಲ್ಲಿ, ಆತನು ಸುಮೇಧನೆಂಬ ಬ್ರಾಹ್ಮಣನಾಗಿದ್ದನು. ದೀಪಂಕರನ ದರ್ಶನದಿಂದ ಪ್ರೇರಿತನಾಗಿ, ತಾನೂ ಮುಂದೆ ಬುದ್ಧನಾಗಬೇಕೆಂಬ ಸಂಕಲ್ಪ ತೊಟ್ಟು, ಧರ್ಮದಲ್ಲಿ ನಡೆಯತೊಡಗಿದನು. ಅಂದಿನಿಂದ ಮುಂದೆ, ತಿರ್ಯಗ್ಗತಿಯಿಂದ ಮಾನುಷ ದೇವಗತಿಗಳ ವರೆಗಿನ ಮೂರೂ ಗತಿಗಳಲ್ಲಿ ಬಹು ಬಾರಿ ಬಂದನು. ಆವಾವ ಗತಿಗಳಲ್ಲಿ ಬಂದರೂ ಅಲ್ಲಲ್ಲಿ ದಾನ, ಶೀಲ, ನೈಷ್ಕ್ರಮ್ಯ, ಪ್ರಜ್ಞಾ, ವೀರ್ಯ, ಕ್ಷಾಂತಿ, ಸತ್ಯ, ಅಧಿಷ್ಠಾನ, ಮೈತ್ರಿ, ಉಪೇಕ್ಷಾ ಎಂಬ ದಶ ಪಾರಮಿತೆಗಳನ್ನು—ಎಂದರೆ ಅಮಿತಪಾರವಾದ, ಅಪಾರವಾದ, ಪರಿಪೂರ್ಣ ಗುಣಗಳನ್ನು—ಭಾವಿಸಿಕೊಂಡು, ಕಡೆಯ ಭವದಲ್ಲಿ ಕಪಿಲವಸ್ತುವಿನ ಶಾಕ್ಯವಂಶದಲ್ಲಿ ಅವತರಿಸಿ, ತನ್ನ ಇಪ್ಪತ್ತೊಂಬತ್ತನೆಯ ವಯಸ್ಸಿನಲ್ಲಿ ಗೃಹತ್ಯಾಗಮಾಡಿ ಪರಿನಿಷ್ಕ್ರಮಣವನ್ನು ಆಚರಿಸಿ, ಆರು ವತ್ಸರಗಳ ತೀವ್ರ ತತ್ತ್ವಾನ್ವೇಷಣೆಯ ತುದಿಗೆ ಸಮ್ಯಕ್‌ಸಂಬುದ್ಧನಾದನು. ಆಗಿ, ತನ್ನ ಧರ್ಮಚಕ್ರಪ್ರವರ್ತನದಿಂದ ಬೃಹತ್ ಬೌದ್ಧ ಸಂಘವನ್ನು ಸ್ಥಾಪಿಸಿದನು. ಆಗಾಗ, ಸಂಘಕ್ಕೆ ಪ್ರತಿಬೋಧಿಸಬೇಕಾಗಿ ಬಂದ ಅವಸರದಲ್ಲಿ, ದೃಷ್ಟಾಂತರೂಪವಾಗಿ ತನ್ನ ಪೂರ್ವಜನ್ಮ ವೃತ್ತಾಂತವನ್ನು ಕಥಿಸುತ್ತಿದ್ದನು; ಆ ಜನ್ಮದಿಂದ ಈ ಜನ್ಮದ ವರೆಗೆ ತನ್ನೊಡನೆ ಜನ್ಮಜನ್ಮಕ್ಕೂ ಬಂಧಿಸಿ ಬಂದ ಸಾಂಘಿಕರ ಕತೆಯನ್ನು ಹೇಳುತ್ತಿದ್ದನು" ಎಂದು ಬೌದ್ಧರು—ಹೀನಯಾನದವರಾಗಲಿ, ಮಹಾಯಾನದವರಾಗಲಿ—ನಂಬುತ್ತಾರೆ.

ಇವುಗಳಲ್ಲಿ, ಬುದ್ಧನ ಪೂರ್ವಜನ್ಮದ ಕತೆಗಳಿಗೆ "**ಜಾತಕ**"ವೆಂದೂ ಬುದ್ಧನ ಶಿಷ್ಯರಾದ ಭಿಕ್ಷು ಭಿಕ್ಷುಣಿಯರ ಪೂರ್ವಕತೆಗಳಿಗೆ "**ಅವದಾನ**"ವೆಂದೂ ಹೆಸರಿಟ್ಟಿದ್ದಾರೆ. "ಬುದ್ಧವಚನ"ವೆಂದು ಪ್ರಸಿದ್ಧವಾಗಿ ಪಾಲೀ

ಭಾಷೆಯಲ್ಲಿರುವ ಬೌದ್ಧ ಧರ್ಮಸಾಹಿತ್ಯಕ್ಕೆ ಬೌದ್ಧರು ಲಕ್ಷಣವೆಂದು ಕೊಡುವ ಒಂಭತ್ತು ಅಂಗಗಳಲ್ಲಿ "ಜಾತಕ"ವೆಂಬುದು ಏಳನೆಯದು. ಇದೇ "ಬುದ್ಧವಚನ"ಕ್ಕೆ 'ತಿಪಿಟಕ' (ತ್ರಿಪಿಟಕ)ವೆಂಬುದು ಹೆಚ್ಚು ಪರಿಚಿತವಾದ ಹೆಸರು. ಎರಡನೆಯ ಪಿಟಕವಾದ 'ಸುತ್ತಪಿಟಕ'ದ ಒಳಗಿನ ಐದು 'ನಿಕಾಯ'ಗಳಲ್ಲಿ ಕಡೆಯದು "ಖುದ್ದಕ ನಿಕಾಯ" (ಕ್ಷುದ್ರಕ ನಿಕಾಯ). ಈ 'ಖುದ್ದಕನಿಕಾಯ'ದ ಹದಿನೈದು ಪುಸ್ತಕಗಳಲ್ಲಿ ಹತ್ತನೆಯದಾದ **"ಜಾತಕಟ್ಠಕಥಾವಣ್ಣನಾ"** (ಜಾತಕಾರ್ಥ ಕಥಾವರ್ಣನಾ) ಎಂಬುದು ೫೪೭ ಜಾತಕಗಳನ್ನು ಒಳಕೊಂಡದ್ದು; ಹದಿಮೂರನೆಯ ಪುಸ್ತಕವೇ "ಅವದಾನ". ಕೊನೆಯದಾದ "ಚರಿಯಾ ಪಿಟಕ" (ಚರ್ಯಾಪಿಟಕ)ವೆಂಬ ಹದಿನೈದನೆಯ ಪುಸ್ತಕದಲ್ಲಿ, ಬುದ್ಧನು ಹಿಂದಿನ ಜನ್ಮಗಳಲ್ಲಿ ಆಚರಿಸಿದ ಪಾರಮಿತೆಗಳನ್ನು ಜಾತಕಗಳಿಂದ ಪದ್ಯರೂಪವಾಗಿ ತೋರಿಸುವ ಪ್ರಯತ್ನವಿದ್ದು, ಅದು ಅಪೂರ್ಣವಾಗಿದೆ.

ತಾನು ಮುಂದೆ ಬುದ್ಧನಾಗಬೇಕೆಂದು ಅಂದು ಸಂಕಲ್ಪಿಸಿ, ಅನೇಕ ಭವಗಳಲ್ಲಿ ಬಂದು, ಸುಮೇಧನು ಆ ಆ ವಿವಿಧ ಜನ್ಮಗಳಲ್ಲಿ ವಿವಿಧ ಪಾರಮಿತೆಗಳನ್ನು ಪರಿಪೂರ್ಣಗೊಳಿಸುತ್ತಿದ್ದನಷ್ಟೆ. ಹೀಗೆ, ಮುಂದೆ ಬುದ್ಧನಾಗುವುದಕ್ಕೆ ಬೇಕಾದ ಸತ್ವವನ್ನು ಆತನು ಪ್ರತಿಜನ್ಮದಲ್ಲಿಯೂ ಸಂಪಾದಿಸಿಕೊಳ್ಳುತ್ತಿದ್ದನಾದ್ದರಿಂದ ಆ ಆ ಜನ್ಮಗಳನ್ನೆತ್ತಿದ್ದ ಅವನನ್ನು **"ಬೋಧಿಸತ್ವ"**ನೆಂದು ಕರೆಯುವುದು ವಾಡಿಕೆ. ಈ ಬೋಧಿಸತ್ವನು ಬದುಕಿದ ಬದುಕಿನ ಕತೆಗಳೇ "ಜಾತಕ"ಗಳು. ಈ ರೀತಿಯ "ಹಿಂದಿನ ಜನ್ಮ"ದ ಕತೆಗಳನ್ನು ಗೌತಮಬುದ್ಧನು ತನ್ನ "ಇಂದಿನ ಜನ್ಮ"ದಲ್ಲಿ ದೃಷ್ಟಾಂತವಾಗಿ ನಿರೂಪಿಸುತ್ತಿದ್ದುದರಿಂದ ಪ್ರತಿ ಜಾತಕಕತೆಯಲ್ಲಿಯೂ ಎರಡು ಭಾಗಗಳಿರಬೇಕಾಗಿ, ಇವೆ. ಪ್ರತಿ ಜಾತಕವೂ (೧) "ಭಗವಂತನಾದ ಬುದ್ಧನು ಇಂತಹ ಕಡೆ ಹೀಗೆ ತಂಗಿರುವಾಗ, ಇಂತಹ ಶಿಷ್ಯರು ಬಂದು ಹೀಗೆ ಹೀಗೆ ನಡೆಯಿತೆಂದು ಗುರುವಿಗೆ ತಿಳಿಸಿದರು. ಆಗ ಗುರು 'ಈಗ ಮಾತ್ರ ಹೀಗಾದುದಲ್ಲ, ಹಿಂದೆಯೂ ಹೀಗೇ ನಡೆಯಿತು' ಎಂದು ಹೇಳಿ, ಹಿಂದಿನ ಕತೆಯನ್ನು ತಿಳಿಸಿದನು" ಎಂದು ಮೊದಲಾಗಿ; (೨) "ಹಿಂದೆ ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿ

ಸತ್ವನು ಇಂತಹ ಕಡೆ ಈ ರೂಪಿನಿಂದ ಹುಟ್ಟಿಬಂದಾಗ, ಹೀಗೆ ಹೀಗೆ ನಡೆಯಿತು" ಎಂದು ಪೂರ್ವಕತೆಯಿಂದ ಮುಂದುವರಿಯುವುದು. ಕೊನೆಗೆ "ಭಿಕ್ಷುಗಳೆ, ಆ ಜನ್ಮದಲ್ಲಿ ಇವನಾಗಿದ್ದವನೇ ಈ ಜನ್ಮದಲ್ಲಿ ಇವನಾಗಿದ್ದಾನೆ. ಆ ಜನ್ಮದ ಆ ಆ ವ್ಯಕ್ತಿಗಳು ಇಂದು ಇವರಿವರಾಗಿದ್ದಾರೆ. ಹಿಂದೆ ಹೀಗೆ ನುಡಿದು ಹೀಗೆ ನಡೆದುದು ನಾನೇ" ಎಂದು ಬುದ್ಧನ ಬಾಯಲ್ಲಿ ಬಂದ ಮಾತುಗಳಿಂದ ಪ್ರತಿ ಜಾತಕ ಮುಗಿಯುತ್ತದೆ. ಪ್ರತಿ ಜಾತಕದ ಈ ಎರಡು ಭಾಗಗಳಲ್ಲಿ ಮೊದಲನೆಯದು ಸಾಮಾನ್ಯವಾಗಿ ಸಪ್ಪೆ, ಎರಡನೆಯದರ ನೆರಳು ಮಾತ್ರ; ಎರಡನೆಯ ಭಾಗವೇ ನಿಜವಾದ, ಸತ್ವಪೂರ್ಣ '**ಜಾತಕ**'. ಆದ್ದರಿಂದ ಈ ಎರಡನೆಯ ಭಾಗವಾದ ಜಾತಕಗಳನ್ನು "ಬುದ್ಧನು ಹೇಳಿದ ಬೋಧಿಸತ್ವನ ಕತೆಗಳು" ಎನ್ನಬಹುದು. ಅಥವಾ, ಸಣ್ಣದಾಗಿರಲೆಂದು "**ಬುದ್ಧನ ಕತೆಗಳು**" ಎಂದರೂ ತಪ್ಪಾಗದು.

ಈ ರೀತಿಯಾಗಿ "ಜಾತಕ"ದ ಉಗಮವನ್ನು ಕುರಿತು ಬೌದ್ಧರು ಹೇಳುವುದನ್ನು ಸಂಶೋಧಕರು ಒಪ್ಪುವುದಿಲ್ಲ; ಅದಕ್ಕೆ ಕಾರಣವಿಲ್ಲದೆಯೂ ಇಲ್ಲ. ಬುದ್ಧನ ಮಾತುಕತೆ ಅವನ ಕಾಲದಲ್ಲಾಗಲಿ ಅದಕ್ಕೆ ಅವಿದೂರಕಾಲದಲ್ಲಾಗಲಿ ಗ್ರಂಥಸ್ಥವಾಗಲಿಲ್ಲ; ಕೇವಲ ಮುಖಪಾಠವಾಗಿತ್ತು. ಅದು ಗ್ರಂಥಸ್ಥವಾದುದು ಕ್ರಿ.ಪೂ. ೧ನೆಯ ಶತಮಾನದಲ್ಲಿ, ಸಿಂಹಳದಲ್ಲಿ; ಆದರೆ ಬುದ್ಧನಿದ್ದುದು ಕ್ರಿ.ಪೂ ಆರನೆಯ ಶತಮಾನದಲ್ಲಿ, ಮಧ್ಯ ಹಿಂದೂದೇಶದಲ್ಲಿ. ಈಗ ನಮಗೆ ದೊರಕಿರುವ 'ಜಾತಕ'ವು ಮೂಲಮಾತೃಕೆಯಲ್ಲ; ಮೂಲದ ಮೇಲಿನ 'ಅರ್ಥಕಥೆ' ಅಥವಾ ವ್ಯಾಖ್ಯಾನ. ಈ ಗದ್ಯಪದ್ಯ ಮಿಶ್ರವಾಗಿ ದೊರಕಿರುವ "ಜಾತಕಟ್ಠಕಥಾವಣ್ಣನಾ" ಗ್ರಂಥದ ಗದ್ಯ ಪದ್ಯಕ್ಕಿಂತ ಅತಿ ಈಚಿನದು. ಪದ್ಯದ ರೂಪು ಭಾಷೆಗಳನ್ನಲ್ಲದೆಹೋದರೂ ಅದರ ಭಾವವನ್ನಾದರೂ ಬುದ್ಧನ ಸಮಕಾಲಿಕವೆಂದು ಒಪ್ಪಬಹುದು; ಆದರೆ ಗದ್ಯಕ್ಕೆ ಅಷ್ಟು ಪ್ರಾಚೀನತೆ ಕೊಡಲಾರರು. ಅಲ್ಲದೆ ಕತೆಗಳಲ್ಲಿ ಕಚ್ಚಕಸಗಳ ಜೊತೆಗೆ 'ರಸಘಟ್ಟಿ'ಗಳೂ ಸಭ್ಯವೂ ಉದಾತ್ತವೂ ಆದವುಗಳ ಸಾಲಿನಲ್ಲಿಯೇ ಅಸಭ್ಯಗಳೂ ಅನುದಾತ್ತಗಳೂ ಆದ ಕತೆಗಳೂ ದೊರಕುತ್ತವೆ. ಅಲ್ಲದೆ, ಈ "ಜಾತಕ"

ಪುಸ್ತಕದಲ್ಲಿ ತಲೆದೋರುವ ಅನೇಕ ಕತೆಗಳಿಗೆ ಬೀಜವಾಗಲಿ ಸಾಮ್ಯ ವಾಗಲಿ ಸುಲಭವಾಗಿ ಸಿಕ್ಕುತ್ತದೆ—ಸ್ವಯಂ ಬೌದ್ಧರ ಪಿಟಕದ ಇತರ ಪುಸ್ತಕಗಳಲ್ಲಿ ಮಾತ್ರವಲ್ಲ; ಭಾರತದ ಇತರ ಕಥಾಸಾಹಿತ್ಯಕ್ಕೆ ಆಕರ ಗಳಾದ ತಂತ್ರಾಖ್ಯಾಯಿಕಾ, ಪಂಚತಂತ್ರ, ಹಿತೋಪದೇಶ, ಕಥಾಸರಿ ತ್ಸಾಗರ ಮುಂತಾದವುಗಳಲ್ಲಿ ಕೂಡ. ಹಿಂದುಗಳ ರಾಮಾಯಣ ಭಾರತ ಗಳ ಕೆಲವು ಉಪಾಖ್ಯಾನಗಳನ್ನೂ ಜೈನಪುರಾಣಗಳ ಹಲವು ಕತೆ ಗಳನ್ನೂ ಈ ಜಾತಕಗಳಲ್ಲಿ ಕೆಲವು ಹೋಲುತ್ತವೆ. ಇದೂ ಅಲ್ಲದೆ, ಕಪಟ ಸಂನ್ಯಾಸಿಯಾಗಿ ಇಲಿಗಳನ್ನು ಕೊಂದ ಬೆಕ್ಕು, ಗೂಳಿಯೊಡನೆ ಮಾಡಿದ ಸ್ನೇಹ ಮುರಿದು ಅದನ್ನು ಕೊಂದ ಸಿಂಹ, ಮೊಸಳೆಗೆ ಮೋಸ ಮಾಡಿದ ಮಂಗ, ಸಿಂಹ ಚರ್ಮದ ಕತ್ತೆ, ಮೀನುಗಳನ್ನು ವಂಚಿಸಿ ತಿಂದು ಏಡಿಯ ಕೈಯಲ್ಲಿ ಸತ್ತ ಕೊಕ್ಕರೆ, ಕಾಗೆಯನ್ನು ಮೋಸಮಾಡಲು ಯತ್ನಿಸಿದ ನರಿ—ಮುಂತಾಗಿ 'ಜಾತಕ'ದಲ್ಲಿ ಕಾಣುವ ಹಲವು ಕತೆಗಳು ಹಿಂದೂದೇಶದ ಕಥಾಸಾಹಿತ್ಯದಲ್ಲಿ ಮಾತ್ರವಲ್ಲ, ಅನ್ಯದೇಶದವುಗಳಲ್ಲೂ ಸಣ್ಣ ಪುಟ್ಟ ವ್ಯತ್ಯಾಸಗಳೊಡನೆ ಮೈದೋರುತ್ತವೆ. ಇಂತಹ ಕಡೆ ಗಳಲ್ಲಿ ಯಾರಿಂದ ಯಾರು ಯಾವಾಗ ಎರವು ತೆಗೆದುಕೊಂಡರೆಂದು ನಿಷ್ಕರ್ಷಿಸುವುದು ಅಷ್ಟು ಸುಲಭವಲ್ಲ.

ಇವೆಲ್ಲಾ ಕಾರಣಗಳನ್ನು ಕಂಡು, "ಈ 'ಜಾತಕ' ಪುಸ್ತಕದಲ್ಲಿನ ಕೆಲವು ಕತೆಗಳ ವಿಷಯಗಳು ಬುದ್ಧನ ಬಾಯಿಂದಲೂ ಅವನ ಶಿಷ್ಯರ ಮುಖದಿಂದಲೂ ಬಂದಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಆದರೆ ಈಗಿ ರುವ ಪುಸ್ತಕವಷ್ಟನ್ನೂ ಬುದ್ಧನ ಕಾಲಕ್ಕೆ ತಗುಲಿಸಲು ಆಗುವುದಿಲ್ಲ. ಈ ಪುಸ್ತಕವು ಒಬ್ಬನು ಹೇಳಿ ಬರೆದು ಆದುದಲ್ಲ; ಅನೇಕ ಕಡೆ ಅನೇಕ ರಲ್ಲಿ ಪ್ರಚಾರವಾಗಿದ್ದ ಕತೆಗಳನ್ನು ಸಂಗ್ರಹಿಸಿ ಆದುದು, ಈ ಪುಸ್ತಕ. ಇದನ್ನು ಸಂಕಲನ ಮಾಡಿದ ಸಂಪಾದಕನು ಯಾರೆಂದು ತಿಳಿದಿಲ್ಲ. ಸಂಕಲನಮಾಡಿದ ಕಾಲವೂ ಗೊತ್ತಿಲ್ಲ" ಎಂದು ಸಂಶೋಧಕರು ಅಭಿ ಪ್ರಾಯಪಡುತ್ತಾರೆ.

ಈ ಅಭಿಪ್ರಾಯವನ್ನು ಒಪ್ಪಿಕೊಂಡರೂ ಈ 'ಜಾತಕ' ಪುಸ್ತಕದ ಬೆಲೆಗೆ ಏನೂ ಕೊರೆಯಿಲ್ಲ. ಕತೆಗಳ ರಮ್ಯತೆಗಾಗಿ ಮಾತ್ರವಲ್ಲ; ಅವು

'ಸುಲಿದ ಬಾಳೆಯ ಹಣ್ಣಿನಂದದಿ' ನೀಡುವ ಧರ್ಮದ ಸಾರಸರ್ವಸ್ವಕ್ಕೆ ಮಾತ್ರವಲ್ಲ; ಅಲ್ಲಿ ತಿಳಿದು ಬರುವ ಪ್ರಾಚೀನ ಭಾರತದ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಮುಂತಾದ ನಾನಾಮುಖವಾದ ಸಂಸ್ಕಾರಮಯ ಜೀವನದ ಸಾಕ್ಷಾತ್ಕಾರಕ್ಕಾಗಿಯೂ ಈ "ಜಾತಕ" ಗಳನ್ನು ಜಗತ್ತಿನ ಮೂಲೆಮೂಲೆಗಳಲ್ಲಿ ಜನ ಬೇರೆ ಬೇರೆ ಭಾಷೆಗಳಲ್ಲಿ ಓದುತ್ತಿದ್ದಾರೆ.

ಬರ್ಹತ್ ಮತ್ತು ಸಾಂಚಿ (ಕ್ರಿ. ಪೂ ೨, ೩ನೆಯ ಶತಮಾನ) ಎಂಬೆಡೆಯ ಸ್ತೂಪಗಳಲ್ಲೂ, ಅಮರಾವತಿ (ಕ್ರಿ. ಶ. ೨ನೆಯ ಶತಮಾನ) ಅಜಂತಗಳಲ್ಲೂ, ಜಾವಾದ್ವೀಪದ ಬೊರೊಬುದೂರ್ (ಕ್ರಿ. ಶ. ೯ನೇ ಶತಕ), ಬರ್ಮಾದೇಶದ ಪಗಣ (೧೩ನೇ ಶತಕ), ಸಯಾಂದೇಶದ ಸುಖೋದಯ(೧೪ನೇ ಶತಕ)—ಎಂಬಲ್ಲಿನ ಬೃಹದ್ದೇವಾಗಾರಗಳಲ್ಲಿಯೂ ಚತುರ ರೂವಾರಿಗಳು ಅನೇಕ ಜಾತಕ ಕಥೆಗಳನ್ನು ಕಲ್ಲಿನ ಬಾಯಿಂದ ಹೇಳಿಸಿ ಕೃತಾರ್ಥರಾಗಿದ್ದಾರೆ.

ಇಂತಹ ಜಾತಕ ಸಾಹಿತ್ಯದ ಸ್ವಲ್ಪ ಭಾಗವನ್ನೂ ಅದಕ್ಕೆ ಸಂಬಂಧಿಸಿದ ಶಿಲಾಶಿಲ್ಪದ ಸ್ವಲ್ಪ ಭಾಗವನ್ನೂ ಕನ್ನಡಕ್ಕೆ ತಂದ ಸಯ್ಪು ನನ್ನದು —ಎಂಬುದಿಷ್ಟೇ ನನ್ನ ತೃಪ್ತಿ.

* * * * *

ಈ ಪುಸ್ತಕವನ್ನು ಸಿದ್ಧಗೊಳಿಸಲು ಬೇಕಾಗಿದ್ದ "ಜಾತಕ"ದ ಪಾಲೀ ಮೂಲ ಮತ್ತು ಆಂಗ್ಲ ಅನುವಾದಗಳ ಉಪಯೋಗಕ್ಕಾಗಿ ರಾಜಕಾರ್ಯ ಪ್ರವೀಣ ಶ್ರೀ ಎನ್. ಎಸ್. ಸುಬ್ಬರಾವ್, ಎಂ.ಎ. (ಕ್ಯಾಂಟಬ್), ಬಾರ್-ಅಟ್-ಲಾ ಅವರಿಗೂ ಮೈಸೂರಿನ ಓರಿಯೆಂಟಲ್ ಲೈಬ್ರರಿ, ಯೂನಿವರ್ಸಿಟಿ ಲೈಬ್ರರಿ ಮತ್ತು ಬೆಂಗಳೂರಿನ ಸೆಂಟ್ರಲ್ ಕಾಲೇಜು ಲೈಬ್ರರಿಯ ಅಧಿಕಾರಿಗಳಿಗೂ ನಾನು ಋಣಿಯಾಗಿದ್ದೇನೆ.

ಈ ಪುಸ್ತಕವನ್ನು ಉಚಿತವಾದ ಚಿತ್ರಗಳಿಂದ ಅಲಂಕರಿಸಲು ಅಪ್ಪಣೆಯನ್ನು ಕೊಟ್ಟ

The Superintendent, Indian Museum, Archæological Section, Calcutta.

The Curator, Central Museum, Lahore.

ಇವರಿಗೂ

ಬೊರೊಬುದೂರ್ ದೇವಾಗಾರದ ಶಿಲ್ಪಗಳ ಚಿತ್ರಸ್ವಾಮ್ಯ ತಮ್ಮದಾದ

The Director, Archæological Service in Netherlands, India.

ಇವರಿಂದ ಬೇಕಾದುದನ್ನು ದೊರಕಿಸಿಕೊಟ್ಟ

Dr. A. Venkatasubbiah, M.A., Ph.D., LL.B., Mysore.

ಇವರಿಗೂ,

ಬಳ್ಳಿಗಾವೆಯ ದೇವಾಲಯದಿಂದ ಚಿತ್ರ ತೆಗೆದುಕೊಟ್ಟ

P. Srinivasa Rao, Esq., M.Sc., Bangalore,

ಇವರಿಗೂ ನನ್ನ ಶುದ್ಧ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

೧-೧-೪೦,
ಮಲ್ಲೇಶ್ವರ, ಬೆಂಗಳೂರು.

ಜಿ. ಪಿ. ರಾಜರತ್ನಂ.

# ಜಾತಕಗಳ ವಿವರ

## ಚಿತ್ರಗಳ ವಿವರ

# ಇಪ್ಪತ್ತೆಂಟು ಕತೆ

ಪಾಲೀ " ಜಾತಕ " ಪುಸ್ತಕದಲ್ಲಿರುವ ಕತೆಗಳು ಎಲ್ಲವೂ ಬುದ್ಧನ ಪೂರ್ವಜನ್ಮ ವೃತ್ತಾಂತವನ್ನು ಯಥಾವತ್ತಾಗಿ ತಿಳಿಸುವುವೆಂಬ ಮಾತಿನಲ್ಲಿ ನಂಬಿಕೆಯಿಡಲಿ, ಇಡದಿರಲಿ; ಈ ಪುಸ್ತಕದಲ್ಲಿನ ಬಹುಮಟ್ಟಿನ ಕತೆಗಳನ್ನು, ಜನರಿಗೆ ಧರ್ಮೋಪದೇಶ ಮಾಡುವಾಗ, ನೀತಿಯನ್ನು ಕಲಿಸುವಾಗ, ಬುದ್ಧನಾಗಲಿ ಅವನ ಶಿಷ್ಯರಾಗಲಿ ಉಪಯೋಗಿಸಿಕೊಂಡಿರಬೇಕೆಂದು ಧಾರಾಳವಾಗಿ ನಂಬಬಹುದು.

ಇಂತಹ ಇಪ್ಪತ್ತೆಂಟು ಕತೆಗಳನ್ನು ಆಯ್ದು ಕೆಳಗೆ ಕೊಟ್ಟಿದೆ. ಇಲ್ಲಿ ಹೇಳಬೇಕಾದ ನೀತಿ ಸಾಮಾನ್ಯವಾಗಿ ಗಾಹೆಗಳೆಂಬ ಪದ್ಯದ ರೂಪದಲ್ಲಿದೆ. ಈ ಪದ್ಯಗಳಲ್ಲಿ ಹೇಳಿದ ನೀತಿಯನ್ನು ಗದ್ಯದ ಕತೆಯ ರೂಪದಲ್ಲಿ ರಸವತ್ತಾಗಿ ವಿವರಿಸುವುದು ' ಜಾತಕ 'ದ ಪದ್ಧತಿ. ಇಂತಹ ಕಡೆ ನವುರಾದ, ನಯವಾದ, ಸಭ್ಯವಾದ, ಹರಿತವಾದ ಹಾಸ್ಯದ ಬಳಕೆಯನ್ನು ವಾನರೇಂದ್ರ, ಗಾಂಗೇಯ, ಗರ್ಹಿತ, ಮಹಾಪಿಂಗಲ, ದೂತ, ಆರಾಮದೂಷಕ, ಚರ್ಮಶಾಟಕ ಮೊದಲಾದ ಕೆಲವು ಜಾತಕಗಳಲ್ಲಿ ಗಮನಿಸಬಹುದು.

## ನೃತ್ತ ಜಾತಕ (೩೨)

ಹಿಂದೆ, ಪ್ರಥಮ ಕಲ್ಪದಲ್ಲಿ, ಚತುಷ್ಪಾದಗಳು ಸಿಂಹವನ್ನೂ ಮತ್ಸ್ಯಗಳು ಆನಂದಮತ್ಸ್ಯವನ್ನೂ ಪಕ್ಷಿಗಳು ಸುವರ್ಣಹಂಸವನ್ನೂ ರಾಜನನ್ನಾಗಿ ಮಾಡಿದವು.

ಆ ಸುವರ್ಣಹಂಸರಾಜನ ಮಗಳಾದ ಮರಿಹಂಸದ ರೂಪ ಬಹು ಚೆನ್ನಾಗಿತ್ತು. ಅದಕ್ಕೆ ಅವನು ಒಂದು ವರ ಕೊಟ್ಟನು. ಅದು ತನಗೆ

ಇಷ್ಟವಾದ ಗಂಡ ಬೇಕೆಂದು ವರಿಸಿತು. ಹಂಸರಾಜನು ಅದಕ್ಕೆ ಆ ವರ ಕೊಟ್ಟು, ಹಿಮವಂತದಲ್ಲಿ ಎಲ್ಲಾ ಪಕ್ಷಿಗಳನ್ನೂ ಕೂಡಿಸಿದನು. ಹಂಸ ನವಿಲು ಮೊದಲಾದ ನಾನಾ ಪ್ರಕಾರದ ಹಕ್ಕಿಗಳ ಗುಂಪು ಬಂದು ಒಂದು ದೊಡ್ಡ ಕಲ್ಲಿನ ಮೇಲೆ ನೆರೆದವು.

ಹಂಸರಾಜನು "ನಿನ್ನ ಚಿತ್ತಕ್ಕೆ ರುಚಿಸಿದ ಸ್ವಾಮಿಯನ್ನು ಬಂದು ಆರಿಸಿಕೊ" ಎಂದು ಮಗಳಿಗೆ ಹೇಳಿ ಕಳಿಸಿದನು. ಅದು ಪಕ್ಷಿಗಳ ಗುಂಪನ್ನು ಕುರಿತು ನೋಡುತ್ತ ಮಣಿಯ ಬಣ್ಣದ ಕತ್ತೂ ಚಿತ್ರವಾದ ಗರಿಯೂ ಉಳ್ಳ ನವಿಲನ್ನು ಕಂಡು "ಇದು ನನ್ನ ಸ್ವಾಮಿಯಾಗಲಿ" ಎಂದು ಬಯಸಿತು. ಆಗ ಹಕ್ಕಿಗಳ ಗುಂಪು ನವಿಲಿನ ಬಳಿಸಾರಿ, "ಅಯ್ಯ ನವಿಲೆ, ಈ ರಾಜನ ಮಗಳು ಗಂಡನನ್ನು ಹುಡುಕುತ್ತ, ಇಷ್ಟು ಹಕ್ಕಿಗಳ ನಡುವೆ ನಿನ್ನನ್ನು ಬಯಸಿರುವಳು" ಎಂದು ಹೇಳಿದವು. ನವಿಲು "ಇದುವರೆಗೆ ನೀವು ನನ್ನ ಬಲವನ್ನು ಕಂಡಿಲ್ಲ" ಎಂದು ಅತಿಯಾದ ತೃಪ್ತಿಯಿಂದ ಲಜ್ಜೆಯ ಕಟ್ಟನ್ನು ಮುರಿದು, ಆಗಲೇ ಆ ದೊಡ್ಡ ಹಕ್ಕಿಯ ಗುಂಪಿನ ನಡುವೆ ರೆಕ್ಕೆಗಳನ್ನು ಹರಡಿ ಕುಣಿಯತೊಡಗಿತು. ಕುಣಿಯುತ್ತ ಮುಚ್ಚುಮರೆಯಿಲ್ಲದಾಯಿತು.

ಸುವರ್ಣಹಂಸರಾಜನು ಲಜ್ಜೆಗೊಂಡು "ಇದಕ್ಕೆ ಹೃದಯದಲ್ಲಿ ಲಜ್ಜೆಯಿಲ್ಲ. ಹೊರಗಡೆ ಸಭ್ಯವಾದ ನಡತೆಯಿಲ್ಲ. ಲಜ್ಜೆಯನ್ನೂ ಸಭ್ಯತೆಯನ್ನೂ ಮುರಿದ ಇದಕ್ಕೆ ನಾನು ಮಗಳನ್ನು ಕೊಡುವುದಿಲ್ಲ" ಎಂದು ಹಕ್ಕಿಗಳ ಗುಂಪಿನ ನಡುವೆ ಈ ಗಾಹೆ ಹೇಳಿದನು:

"ಇದರ ಕೂಗು ಮನೋಜ್ಞವಾಗಿದೆ; ಹಿಂಭಾಗ ಮೆಚ್ಚುವಂತಿದೆ,
ಕತ್ತು ವೈಡೂರ್ಯ ವರ್ಣಕ್ಕೆ ಸಮನಾಗಿದೆ;
ಬಿಚ್ಚಿದ ಬಾಲ ಒಂದು ವ್ಯಾಮದ ಅಳತೆಯಿದೆ.
ಆದರೂ ಕುಣಿವ ನಿನಗೆ ಮಗಳನ್ನು ಕೊಡವೊಲ್ಲೆ."

ಹೀಗೆಂದು, ಹಂಸರಾಜನು, ಅದೇ ಪರಿಸೆಯ ನಡುವೆ ತನ್ನ ಅಕ್ಕನ ಮಗನಾದ ಒಂದು ಮರಿಹಂಸಕ್ಕೆ ಮಗಳನ್ನು ಕೊಟ್ಟನು. ನವಿಲು

ಹಂಸೆಯು ಮಗಳನ್ನು ಪಡೆಯದೆ ಲಜ್ಜೆಗೊಂಡು ಆಗಲೇ ಮೇಲೆದ್ದು ಓಡಿತು. ಹಂಸರಾಜನು ಕೂಡ ತನ್ನ ವಾಸಸ್ಥಾನಕ್ಕೇ ಹೋದನು.

## ಬಕಜಾತಕ (೩೮)

ಹಿಂದೆ, ಬೋಧಿಸತ್ವನು, ಒಂದಾನೊಂದು ಕಾಡಿನಲ್ಲಿದ್ದ ಪದ್ಮ ಸರಸ್ಸನ್ನು ಆಶ್ರಯಿಸಿ ನಿಂತಿದ್ದ ವೃಕ್ಷದಲ್ಲಿ ವೃಕ್ಷದೇವತೆಯಾಗಿ ಹುಟ್ಟಿದನು. ಆಗ ಇನ್ನೊಂದು ಅತಿ ದೊಡ್ಡದಲ್ಲದ ಸರಸ್ಸಿನಲ್ಲಿ ಬೇಸಗೆಯ ಕಾಲಕ್ಕೆ ನೀರು ಕಡಮೆಯಾಯಿತು. ಅಲ್ಲಿ ಬಹಳ ಮೀನುಗಳಿದ್ದವು.

ಆಗ ಒಂದು ಬಕ ಆ ಮೀನುಗಳನ್ನು ಕಂಡು "ಒಂದಾನೊಂದು ಉಪಾಯದಿಂದ ಈ ಮೀನುಗಳನ್ನು ಮೋಸಮಾಡಿ ತಿನ್ನುವೆನು" ಎಂದು ಹೋಗಿ ನೀರಿನ ಬಳಿ ಚಿಂತಿಸುತ್ತ ಕುಳಿತಿತು. ಮೀನುಗಳು ಅದನ್ನು ಕಂಡು "ಏಕೆ, ಆರ್ಯ? ಚಿಂತಿಸುತ್ತ ಕುಳಿತಿರುವೆ?" ಎಂದು ಕೇಳಿದುವು.

"ನಿಮ್ಮನ್ನು ಕುರಿತು ಚಿಂತಿಸುತ್ತಿರುವೆನು"

"ನಮ್ಮನ್ನು ಕುರಿತು ಏನು ಚಿಂತಿಸುವೆ, ಅಯ್ಯ?"

"'ಈ ಸರೋವರದಲ್ಲಿ ನೀರು ಕಡಮೆ. ಆಹಾರ ಕಡಮೆ. ಬಿಸಿಲೋ ಬಹಳ. ಇದಕ್ಕೆ ಈ ಮೀನುಗಳು ಏನು ಮಾಡಿಯಾವು?' ಎಂದು ನಿಮಗಾಗಿ ಚಿಂತಿಸುತ್ತ ಕುಳಿತಿರುವೆನು."

"ಹಾಗಾದರೆ, ಏನುಮಾಡೋಣ, ಅಯ್ಯ?"

"ನೀವು ನನ್ನ ಮಾತಿನಂತೆ ಮಾಡುವುದಾದರೆ ನಾನು ನಿಮ್ಮನ್ನು ಒಬ್ಬೊಬ್ಬರನ್ನಾಗಿ ಕೊಕ್ಕಿನಿಂದ ಹಿಡಿದು ಐದುಬಣ್ಣದ ಪದ್ಮಗಳಿಂದ ಮುಚ್ಚಿದ ಒಂದು ಮಹಾಸರೋವರಕ್ಕೆ ಕೊಂಡೊಯ್ದು ಬಿಡುವೆನು."

"ಅಯ್ಯ, ಮೊದಲ ಕಲ್ಪದಿಂದ ಹಿಡಿದು ಮೀನುಗಳಿಗೋಸ್ಕರ ಬಕ ಚಿಂತಿಸಿದುದಿಲ್ಲ ನೀನು ನಮ್ಮನ್ನು ಒಬ್ಬೊಬ್ಬರನ್ನಾಗಿ ತಿನ್ನಲು ಬಯಸುವವನು."

"ನನ್ನನ್ನು ನಂಬಿದ ನಿಮ್ಮನ್ನು ನಾನು ತಿನ್ನುವುದಿಲ್ಲ. ಸರೋವರ ವಿದೆಯೆಂದು ನನ್ನನ್ನು ನಂಬದಿದ್ದರೆ, ನನ್ನೊಡನೆ ಒಂದು ಮೀನನ್ನು ಸರೋವರ ನೋಡಲು ಕಳುಹಿಸಿರಿ."

ಮೀನುಗಳು ಅದನ್ನು ನಂಬಿ "ಇದು ನೀರಿನ ಮೇಲೂ ನೆಲದ ಮೇಲೂ ಸಮರ್ಥವಾದುದು" ಎಂದು ಒಂದು ಒಕ್ಕಣ್ಣಿನ ಮಹಾಮತ್ಸ್ಯ ವನ್ನು ಆಯ್ದು "ಇದನ್ನು ಕೊಂಡುಹೋಗು" ಎಂದು ಕಳಿಸಿದವು. ಬಕವು ಅದನ್ನು ಹಿಡಿದು ಕೊಂಡೊಯ್ದು ಸರೋವರದಲ್ಲಿ ಬಿಟ್ಟು, ಸರೋವರ ವನ್ನೆಲ್ಲ ಕಾಣಿಸಿ, ಪುನಃ ಕೊಂಡು ಬಂದು ಆ ಮೀನುಗಳ ಬಳಿ ಅದನ್ನು ಬಿಟ್ಟಿತು. ಅದು ಆ ಮೀನುಗಳಿಗೆ ಸರೋವರದ ಸಂಪತ್ತನ್ನು ವರ್ಣಿಸಿತು. ಅವು ಅದನ್ನು ಕೇಳಿ, ಹೋಗಲು ಬಯಸಿ, "ಒಳ್ಳೆಯದಯ್ಯ, ನಮ್ಮನ್ನೂ ಕೊಂಡು ಹೋಗು" ಎಂದವು. ಬಕವು ಮೊದಲು ಆ ಒಕ್ಕಣ್ಣಿನ ಮತ್ಸ್ಯವನ್ನೇ ಹಿಡಿದು ಸರೋವರದ ತೀರಕ್ಕೆ ಒಯ್ದು ಸರೋವರವನ್ನು ಕಾಣಿಸಿ, ಅದರ ತೀರದಲ್ಲಿದ್ದ ವರಣವೃಕ್ಷದಲ್ಲಿ ಇಳಿದು ಅದರ ಕವಲು ಕೊಂಬೆಯಲ್ಲಿ ಅದನ್ನು ಎಸೆದು, ಕೊಕ್ಕಿನಿಂದ ಸೀಳಿ ಸಾಯಿಸಿ, ಮಾಂಸ ವನ್ನು ತಿಂದು, ಮೂಳೆಗಳನ್ನು ವೃಕ್ಷಮೂಲದಲ್ಲಿ ಬೀಳಿಸಿ, ಪುನಃ ಹೋಗಿ "ಆ ಮೀನನ್ನು ಬಿಟ್ಟೆ, ಇನ್ನೊಬ್ಬರು ಬನ್ನಿ" ಎಂದು, ಈ ಉಪಾಯದಿಂದ ಒಂದೊಂದನ್ನೂ ಹಿಡಿದು, ಎಲ್ಲಾ ಮೀನುಗಳನ್ನೂ ತಿಂದು, ಪುನಃ ಬರುವ ವೇಳೆಗೆ ಒಂದು ಮೀನೂ ಕಾಣಿಸಲಿಲ್ಲ.

ಅಲ್ಲಿ ಒಂದು ಏಡಿ ಉಳಿದಿತ್ತು. ಬಕವು ಅದನ್ನೂ ತಿನ್ನಲು ಬಯಸಿ, "ಅಯ್ಯ ಏಡಿ, ನಾನು ಆ ಎಲ್ಲಾ ಮೀನುಗಳನ್ನೂ ಒಯ್ದು ಪದ್ಮಗಳಿಂದ ಮುಚ್ಚಿಹೋದ ಮಹಾಸರೋವರದಲ್ಲಿ ಬಿಟ್ಟೆ. ಬಾ, ನಿನ್ನನ್ನೂ ಒಯ್ಯುವೆನು" ಎಂದಿತು.

"ನನ್ನನ್ನು ಹಿಡಿದುಕೊಂಡು ಹೋಗುವುದಾದರೆ ಹೇಗೆ ಹಿಡಿ ಯುತ್ತೀಯೆ ?"

"ಕಚ್ಚಿ ಹಿಡಿಯುವೆನು."

"ನೀನು ಹಾಗೆ ಹಿಡಿದು ಹೋಗುತ್ತ, ನನ್ನನ್ನು ಬೀಳಿಸಿಬಿಡುತ್ತೀಯೆ. ನಾನು ನಿನ್ನೊಡನೆ ಬರವೊಲ್ಲೆ."

"ಹೆದರಬೇಡ. ನಾನು ನಿನ್ನನ್ನು ಚೆನ್ನಾಗಿ ಹಿಡಿದುಕೊಂಡು ಹೋಗುವೆನು."

ಏಡಿಯು "ಇದು ಮೀನುಗಳನ್ನು ಒಯ್ದು ಸರೋವರದಲ್ಲಿ ಬಿಟ್ಟಿಲ್ಲ. ಆದರೆ ನನ್ನನ್ನು ಸರೋವರದಲ್ಲಿ ಬಿಟ್ಟರೆ—ಒಳ್ಳೆಯದು. ಬಿಡದಿದ್ದರೆ, ಇದರ ಕತ್ತನ್ನು ಕತ್ತರಿಸಿ ಜೀವ ತೆಗೆಯುವೆನು" ಎಂದು ಚಿಂತಿಸಿ, "ಅಯ್ಯ ಬಕ, ನೀನು ನನ್ನನ್ನು ಚೆನ್ನಾಗಿ ಹಿಡಿಯಲಾರೆ. ಆದರೆ ನನ್ನ ಹಿಡಿತ ಬಿಗಿಯಾದುದು. ನಾನು ನನ್ನ ಕೊಂಡಿಗಳಿಂದ ನಿನ್ನ ಕತ್ತನ್ನು ಹಿಡಿಯುವುದಾದರೆ, ನಿನ್ನ ಕತ್ತನ್ನು ಬಿಗಿಯಾಗಿ ಹಿಡಿದು ನಿನ್ನೊಡನೆ ಹೊರಡುವೆನು" ಎಂದಿತು.

ಬಕವು ಅದು ತನ್ನನ್ನು ವಂಚಿಸಬಯಸುವುದೆಂದು ತಿಳಿಯದೆ, ಒಳ್ಳೆಯದೆಂದು ಒಪ್ಪಿತು. ಏಡಿಯು ತನ್ನ ಕೊಂಡಿಗಳಿಂದ ಕಮ್ಮಾರನ ಇಕ್ಕಳದಂತೆ ಅದರ ಕತ್ತನ್ನು ಬಿಗಿಹಿಡಿದು, 'ಇನ್ನು ಹೊರಡು' ಎಂದಿತು. ಬಕ ಅದನ್ನು ಒಯ್ದು ಸರೋವರವನ್ನು ಕಾಣಿಸಿ ವರಣ ವೃಕ್ಷದ ಕಡೆಗೆ ಹೊರಟಿತು.

ಏಡಿಯು "ಮಾವ, ಈ ಸರೋವರ, ಇತ್ತ. ನೀನು ಮತ್ತೆ ಆಕಡೆ ಒಯ್ಯುವೆ?" ಎಂದಿತು. ಬಕವು "ನಾನು ಪ್ರಿಯ ಸೋದರ ಮಾವ, ನೀನು ಅತಿ ಸೋದರಳಿಯ!" ಎಂದು ಹೇಳಿ, "ನಿನ್ನನ್ನು ಎತ್ತಿಕೊಂಡು ತಿರುಗುವ ದಾಸನೆಂದು ನನ್ನನ್ನು ತಿಳಿದೆಯೇನು? ಈ ವರಣ ವೃಕ್ಷದಡಿಯಲ್ಲಿರುವ ಮೂಳೆಯ ರಾಶಿ ನೋಡು. ಈ ಎಲ್ಲಾ ಮೀನುಗಳನ್ನೂ ತಿಂದಂತೆಯೇ ನಿನ್ನನ್ನೂ ತಿನ್ನುವೆನು" ಎಂದಿತು. ಆಗ ಏಡಿಯು "ಈ ಮೀನುಗಳ ಮೂಢತ್ವದಿಂದ ನೀನು ಅವುಗಳನ್ನು ತಿಂದೆ. ನೀನು ನನ್ನನ್ನು ತಿನ್ನಲು ನಾನು ಬಿಡವೊಲ್ಲೆ. ನಾನು ನಿನ್ನನ್ನೇ ನಾಶಮಾಡುವೆನು. ನೀನು ಕೂಡ ಮೌಢ್ಯದಿಂದ ನನಗೆ ಮೋಸ ಹೋದುದನ್ನು ತಿಳಿಯೆ. ಸತ್ತರೆ, ಇಬ್ಬರೂ ಸಾಯೋಣ. ಹೀಗೆ,

ನಿನ್ನ ತಲೆಯನ್ನು ಕತ್ತರಿಸಿ ನೆಲದಲ್ಲಿ ಬೀಳಿಸುವೆನು" ಎಂದು ಹೇಳಿ, ಇಕ್ಕಳದಂತಹ ಕೊಂಡಿಗಳಿಂದ ಅದರ ಕತ್ತನ್ನು ಹಿಂಡಿತು. ಅದು ಬಾಯಿ ಬಿಟ್ಟುಕೊಂಡು, ಕಣ್ಣಲ್ಲಿ ನೀರು ಸುರಿಸಿ, ಮರಣಭಯದಿಂದ ನಡುಗಿ, "ಸ್ವಾಮಿ, ನಾನು ನಿನ್ನನ್ನು ತಿನ್ನಲೊಲ್ಲೆ. ನನ್ನ ಜೀವವುಳಿಸು" ಎಂದಿತು. ಏಡಿಯು "ಹಾಗಾದರೆ, ಹೀಗೆಯೇ ಇಳಿದು ನನ್ನನ್ನು ಸರೋವರದಲ್ಲಿ ಬಿಡು" ಎಂದಿತು. ಬಕವು ಸರೋವರದ ಮೇಲೆ ಇಳಿದು ಬಳಿಯ ಕೆಸರಿನಲ್ಲಿ ಏಡಿಯನ್ನು ಇಟ್ಟಿತು. ಏಡಿಯು, ಕತ್ತರಿಯಿಂದ ಕುಮುದ ನಾಳವನ್ನು ಕತ್ತರಿಸುವಂತೆ, ಅದರ ಕತ್ತನ್ನು ಕತ್ತರಿಸಿ ಕೊಳದ ನೀರನ್ನು ಹೊಕ್ಕಿತು.

ಆ ಆಶ್ಚರ್ಯವನ್ನು ಕಂಡು, ವರಣವೃಕ್ಷದಲ್ಲಿ ವಾಸಿಸುತ್ತಿದ್ದ ದೇವತೆಯು ಮೆಚ್ಚುತ್ತ ವನವು ಧ್ವನಿಕೊಡುವಂತೆ ಮಧುರ ಸ್ವರದಿಂದ ಈ ಗಾಹೆ ಹೇಳಿತು:

"ಕೆಟ್ಟಬುದ್ಧಿಯ ಬಕವು ಏಡಿಯಿಂದ ಸಾವು ಪಡೆದಂತೆ
ಅತಿ ಕೆಟ್ಟಬುದ್ಧಿಯವರಿಗೆ ಕೆಟ್ಟತನದಿಂದ ಸುಖವಾಗದು."

## ವಾನರೇಂದ್ರ ಜಾತಕ (೫೭)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ ಬೋಧಿಸತ್ವನು ಕಪಿಯಾಗಿ ಹುಟ್ಟಿ, ಕ್ರಮವಾಗಿ ಬೆಳೆದು ಕುದುರೆಮರಿಯಷ್ಟು ದೊಡ್ಡವನಾಗಿ ಕಷ್ಟಸಹಿಷ್ಣುವಾಗಿ ಒಂಟಿಯಾಗಿ ಸಂಚರಿಸುತ್ತ ನದೀತೀರದಲ್ಲಿ ವಿಹರಿಸುತ್ತಿದ್ದನು. ಆ ನದಿಯ ನಡುವೆ ನಾನಾಪ್ರಕಾರವಾದ ಮಾವು ಹಲಸುಗಳ ಹಣ್ಣು ತುಂಬಿದ ಮರಗಳ ಒಂದು ದ್ವೀಪವಿತ್ತು. ಆನೆಯ ಬಲವುಳ್ಳವನಾಗಿ ಕಷ್ಟಸಹಿಷ್ಣುವಾದ ಬೋಧಿಸತ್ವನು ನದಿಯ ಈಚೆ ದಡದಿಂದ ಹಾರಿ,—ದ್ವೀಪದ ಈ ಕಡೆ ನದಿಯ ನಡುವೆ ಒಂದು ಕಲ್ಲಿನ ಕೋಡುಂಟು—ಅದರಲ್ಲಿ ಬಿದ್ದು, ಅಲ್ಲಿಂದ ನೆಗೆದು ಆ ದ್ವೀಪದಲ್ಲಿ ದುಮುಕುವನು. ಅಲ್ಲಿ ನಾನಾಪ್ರಕಾರವಾದ ಹಣ್ಣುಗಳನ್ನು

ತಿಂದು, ಸಾಯಂಕಾಲದಲ್ಲಿ ಅದೇ ಉಪಾಯದಿಂದ ಮರಳಿಬಂದು, ತನ್ನ ವಾಸಸ್ಥಾನದಲ್ಲಿ ವಾಸಮಾಡಿ, ಮರುದಿನವೂ ಹಾಗೆಯೇ ಮಾಡುವನು. ಈ ರೀತಿಯಲ್ಲಿ ಅವನು ಅಲ್ಲಿ ವಾಸಿಸುತ್ತಿದ್ದನು.

ಆ ಕಾಲದಲ್ಲಿ ಒಂದು ಮೊಸಳೆ ತನ್ನ ಮಡದಿಯೊಡನೆ ಆ ನದಿಯಲ್ಲಿ ವಾಸಮಾಡಿಕೊಂಡಿತ್ತು. ಬೋಧಿಸತ್ವನು ಆಚೆ ಈಚೆ ಹೋಗುವುದನ್ನು ಆ ಮೊಸಳೆಯ ಹೆಂಡತಿ ಕಂಡು, ಬೋಧಿಸತ್ವನ ಹೃದಯಮಾಂಸದಲ್ಲಿ ಬಯಕೆ ತಾಳಿ "ಅಯ್ಯ, ಈ ವಾನರೇಂದ್ರನ ಹೃದಯಮಾಂಸವನ್ನು ನಾನು ಬಯಸುತ್ತೇನೆ" ಎಂದು ಮೊಸಳೆಗೆ ಹೇಳಿತು. ಮೊಸಳೆ "ಒಳ್ಳೆಯದು. ಪಡೆಯುವೆಯಂತೆ" ಎಂದು ಹೇಳಿ, "ಇಂದು ಸಂಜೆ ದ್ವೀಪದಿಂದ ಬರುವಾಗ ಅದನ್ನು ಹಿಡಿಯುವೆನು" ಎಂದು ಹೋಗಿ ಹೊಳೆಯ ನಡುವಿನ ಕಲ್ಲಿನ ತುದಿಯಲ್ಲಿ ನಿಂತಿತು.

ಬೋಧಿಸತ್ವನು ಹಗಲೆಲ್ಲ ತಿರುಗಾಡಿ ಸಾಯಂಕಾಲಕಾಲದಲ್ಲಿ ದ್ವೀಪದಲ್ಲಿ ನಿಂತುಕೊಂಡಂತೆಯೇ ಆ ಕಲ್ಲನ್ನು ಕುರಿತು ನೋಡಿ "ಈ ಕಲ್ಲು ಹೆಚ್ಚು ಎತ್ತರವಾದಂತೆ ತೋರುತ್ತದೆ. ಏನು ಕಾರಣ ? " ಎಂದು ಚಿಂತಿಸಿದನು. ತಾನು ಯಾವಾಗಲೂ ನೀರಿನ ಆಳತೆಯನ್ನೂ ಕಲ್ಲಿನ ಆಳತೆಯನ್ನೂ ತಿಳಿದುಕೊಳ್ಳುತ್ತಿದ್ದುದರಿಂದ "ಇಂದು ಈ ನದಿಯಲ್ಲಿ ನೀರು ಕಡಮೆಯಾಗಿಲ್ಲ, ಹೆಚ್ಚಿಯೂ ಇಲ್ಲ. ಆದರೂ ಈ ಕಲ್ಲು ದೊಡ್ಡದಾಗಿ ತೋರುತ್ತದೆ. ನನ್ನನ್ನು ಹಿಡಿಯುವುದಕ್ಕಾಗಿ ಯಾವುದಾದರೂ ಮೊಸಳೆ ಮಲಗಿರಬೇಕು" ಎಂದುಕೊಂಡು, "ಇದನ್ನು ವಿಮರ್ಶೆ ಮಾಡೋಣ" ಎಂದು ಅಲ್ಲಿಯೇ ನಿಂತು, ಕಲ್ಲಿನೊಡನೆ ಮಾತನಾಡುವಂತೆ "ಏ, ಕಲ್ಲೆ !" ಎಂದು ಕೂಗಿ, ಮಾರುತ್ತರ ಬರದಿರಲು, ಮೂರುಸಲ ಹಾಗೆಯೇ ಕೂಗಿದನು. "ಈ ಕಲ್ಲೇಕೆ ಉತ್ತರ ಕೊಡುವುದಿಲ್ಲ ?" ಎಂದು ಆ ವಾನರವು ಪುನಃ "ಏ, ಕಲ್ಲೆ ! ಈ ಹೊತ್ತು ಏಕೆ ಉತ್ತರ ಕೊಡುವುದಿಲ್ಲ ?" ಎಂದಿತು. ಆಗ ಮೊಸಳೆಯು "ಓಹೊ, ಮಿಕ್ಕ ದಿನಗಳಲ್ಲಿ ಈ ಕಲ್ಲು ಈ ವಾನರೇಂದ್ರನಿಗೆ ಉತ್ತರ ಕೊಟ್ಟಿತು. ಅದರ ಉತ್ತರವನ್ನು ನಾನು ಕೊಡುವೆನು " ಎಂದು ಚಿಂತಿಸಿ, "ಏನು, ವಾನರೇಂದ್ರ ?" ಎಂದಿತು.

" ನೀನು ಯಾರು ? "

" ನಾನು, ಮೊಸಳೆ."

" ಅಲ್ಲಿ ಏಕೆ ಮಲಗಿರುವೆ?"

" ನಿನ್ನ ಹೃದಯ ಮಾಂಸವನ್ನು ಪಡೆಯುವುದಕ್ಕೋಸ್ಕರ."

ಆಗ ಬೋಧಿಸತ್ವನು, "ನನಗೆ ಹೋಗುವುದಕ್ಕೆ ಬೇರೆ ದಾರಿಯಿಲ್ಲ. ಇವತ್ತು ನಾನು ಈ ಮೊಸಳೆಗೆ ಮೋಸಮಾಡತಕ್ಕುದು" ಎಂದು ಚಿಂತಿಸಿ, " ಅಯ್ಯ ಮೊಸಳೆ, ನಾನು ನನ್ನನ್ನು ನಿನಗೆ ಒಪ್ಪಿಸುತ್ತೇನೆ. ನೀನು ಬಾಯಿ ತೆರೆದು ನಾನು ನಿನ್ನ ಬಳಿ ಬಂದಾಗ ಹಿಡಿದುಕೊ" ಎಂದನು. ಮೊಸಳೆಗಳು ಬಾಯಿ ಬಿಟ್ಟಾಗ, ಕಣ್ಣುಗಳನ್ನು ಮುಚ್ಚುವುವು. ಆದ್ದರಿಂದ, ಅದು ಯೋಚಿಸದೆ ಬಾಯಿಬಿಟ್ಟಾಗ, ಅದರ ಕಣ್ಣು ಮುಚ್ಚಿತು. ಹೀಗೆ ಅದು ಬಾಯಿಬಿಟ್ಟು, ಕಣ್ಣು ಮುಚ್ಚಿ ಮಲಗಿದ ಸ್ಥಿತಿಯನ್ನು ಬೋಧಿಸತ್ವನು ತಿಳಿದು, ದ್ವೀಪದಿಂದ ನೆಗೆದು ಹೊರಟು, ಮೊಸಳೆಯ ತಲೆಯನ್ನು ಮೆಟ್ಟಿ, ಅಲ್ಲಿಂದ ಹಾರಿ ಮಿಂಚಿನಂತೆ ಮಿಂಚಿ ಆಚೆತೀರದಲ್ಲಿ ನಿಂತನು.

ಮೊಸಳೆ ಆ ಆಶ್ಚರ್ಯವನ್ನು ಕಂಡು " ಈ ವಾನರೇಂದ್ರನು ಅತಿ ಆಶ್ಚರ್ಯವನ್ನು ಮಾಡಿದನು" ಎಂದು ಚಿಂತಿಸಿ, " ಭೋ, ವಾನರೇಂದ್ರ ! ಈ ಲೋಕದಲ್ಲಿ ಈ ನಾಲ್ಕು ಗುಣಗಳಿಂದ ಕೂಡಿದವನು ಶತ್ರುಗಳನ್ನು ಜಯಿಸುವನು. ಇವೆಲ್ಲವೂ ನಿನ್ನಲ್ಲಿ ಇವೆಯೆಂದು ತಿಳಿದಿದ್ದೇನೆ" ಎಂದು ಹೇಳಿ, ಈ ಗಾಹೆ ಹೇಳಿತು :

" ವಾನರೇಂದ್ರ ! ನಿನ್ನಂತೆ ಸತ್ಯ, ಧರ್ಮ, ಧೃತಿ, ತ್ಯಾಗ,—ಎಂಬ ಈ ನಾಲ್ಕು ಗುಣಗಳುಳ್ಳವನು ಶತ್ರುವನ್ನು ಹಿಮ್ಮೆಟ್ಟಿಸುವನು."

ಹೀಗೆಂದು ಮೊಸಳೆಯು ಬೋಧಿಸತ್ವನನ್ನು ಪ್ರಶಂಸೆ ಮಾಡಿ ತನ್ನ ವಾಸಸ್ಥಾನಕ್ಕೆ ಹೋಯಿತು.



**ಬಿಡಾಲಜಾತಕ (೧೨೮)** [ಪುಟ ೯

(Copyright: Director, Arch., Survey in Netherlands, India)
(Courtesy: Dr. A. Venkatasubbiah, M.A., Ph.D., LL.B.)



**ಕುರುಂಗಮೃಗ ಜಾತಕ (೨೦೬)** [ಪುಟ ೧೫



(Courtesy : Dr. A. Venkatasubbiah, M.A., Ph.D., LL.B.)

ಇಪ್ಪತ್ತೆಂಟು ಕತೆ

## ಬಿಡಾಲ* ಜಾತಕ (೧೨೮)

ಹಿಂದೆ, ಬ್ರಹ್ಮದತ್ತನು ವಾರಣಾಸಿಯಲ್ಲಿ ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಮೂಷಿಕವಾಗಿ ಹುಟ್ಟಿ, ಬುದ್ಧಿವಂತನಾಗಿ, ಹಂದಿಯ ಮರಿಯಂತೆ ಮಹಾಶರೀರವುಳ್ಳವನಾಗಿ, ಅನೇಕ ನೂರು ಮೂಷಕ ಪರಿವಾರದೊಡನೆ ಕಾಡಿನಲ್ಲಿ ವಿಹರಿಸುತ್ತಿದ್ದನು.

ಆಗ ಒಂದು ಸೃಗಾಲವು ಅಲ್ಲಲ್ಲಿ ತಿರುಗಾಡುತ್ತ, ಆ ಇಲಿಗಳ ಗುಂಪನ್ನು ಕಂಡು "ಈ ಇಲಿಗಳಿಗೆ ಮೋಸಮಾಡಿ ತಿನ್ನುವೆನು" ಎಂದು ಚಿಂತಿಸಿ, ಮೂಷಿಕಗಳ ಮನೆಗೆ ಸಮೀಪವಾಗಿ ಸೂರ್ಯನಿಗೆದುರು ನಿಂತು, ಗಾಳಿಯನ್ನು ಕುಡಿಯುತ್ತ, ಒಂಟಿಕಾಲಲ್ಲಿ ನಿಂತಿತು. ಬೋಧಿಸತ್ವನು ಆಹಾರಕ್ಕೆ ತಿರುಗುವಾಗ ಅದನ್ನು ಕಂಡು, ಅದು ಶೀಲವಂತನಾಗಿರಬೇಕೆಂದು ಅದರ ಬಳಿಗೆ ಹೋಗಿ "ಭನ್ತೇ, ನಿನಗೆ ಏನು ಹೆಸರು?" ಎಂದು ಪ್ರಶ್ನಿಸಿದನು.

"ನನ್ನ ಹೆಸರು—ಧರ್ಮಿಕ."

"ನಾಲ್ಕು ಕಾಲುಗಳನ್ನು ಭೂಮಿಯಲ್ಲಿಡದೆ ಒಂಟಿಕಾಲಲ್ಲಿ ಏಕೆ ನಿಂತಿರುವೆ?"

"ನಾನು ನಾಲ್ಕೂ ಕಾಲಿಟ್ಟು ನೆಲದಲ್ಲಿ ನಿಂತರೆ, ಭೂಮಿ ತಾಳಲಾರದು. ಆದ್ದರಿಂದ ಒಂದೇ ಕಾಲಲ್ಲಿ ನಿಂತಿರುವೆನು."

"ಬಾಯಿ ಏಕೆ ತೆರೆದುಕೊಂಡು ನಿಂತಿರುವೆ?"

"ನಾನು ಬೇರೇನೂ ತಿನ್ನುವುದಿಲ್ಲ. ಗಾಳಿಯೇ ಆಹಾರ."

"ಸೂರ್ಯನಿಗೆ ಎದುರಾಗಿ ಏಕೆ ನಿಂತಿರುವೆ?"

"ಸೂರ್ಯನಿಗೆ ನಮಸ್ಕರಿಸುತ್ತಿರುವೆನು."

---

* ಈ ಜಾತಕದ ಹೆಸರಿನಲ್ಲಿಯೂ ಮುಂದೆ ಗಾಹೆಯಲ್ಲಿಯೂ 'ಬೆಕ್ಕಿ'ನ ಸುದ್ದಿ ಬರುವುದಾದರೂ ಕತೆಯಲ್ಲಿ 'ಸೃಗಾಲ'ವೆಂದಿದೆ.

ಬೋಧಿಸತ್ವನು ಅದರ ಮಾತು ಕೇಳಿ, ಇದು ಶೀಲವಂತನಾಗಿರ ಬೇಕೆಂದುಕೊಂಡು ಅಂದಿನಿಂದ ಇಲಿಗಳ ಗುಂಪಿನೊಡನೆ ಹಗಲೂ ಸಂಜೆ ಅದರ ಸೇವೆಗೆ ಹೋಗುತ್ತಿದ್ದನು.

ಹೀಗೆ ಅವು ಸೇವೆಮಾಡಿ ಹೋಗುವಾಗ, ಸೃಗಾಲವು ಕಟ್ಟಕಡೆಯ ಇಲಿಯನ್ನು ಹಿಡಿದು, ಅದರ ಮಾಂಸವನ್ನು ತಿಂದು, ನುಂಗಿ, ಬಾಯಿ ಒರಸಿ ಕುಳಿತುಬಿಡುತ್ತಿತ್ತು. ಕ್ರಮವಾಗಿ ಇಲಿಗಳ ಗುಂಪು ತೆಳ್ಳ ಗಾಯಿತು. ಇಲಿಗಳು "ಹಿಂದೆ, ನಾವು ಈ ಬಿಲದಿಂದ ಹೊರಡುವಾಗ ದಟ್ಟವಾಗಿದ್ದೆವು. ಈಗ ಶಿಥಿಲವಾಗಿರುವೆವು. ಈಗ ಬಿಲ ತುಂಬುವು ದಿಲ್ಲ. ಇದೇಕೆ?" ಎಂದು ಅದನ್ನು ಬೋಧಿಸತ್ವನಿಗೆ ತಿಳಿಸಿದವು. ಬೋಧಿ ಸತ್ವನು "ಏನು ಕಾರಣದಿಂದ ಇಲಿಗಳು ತೆಳ್ಳಗಾದವು?" ಎಂದು ಚಿಂತಿ ಸುತ್ತ, ಸೃಗಾಲದಲ್ಲಿ ಶಂಕೆಪಟ್ಟು, 'ಇದನ್ನು ವಿಮರ್ಶಿಸಬೇಕು' ಎಂದು, ಸೇವೆಯ ಸಮಯದಲ್ಲಿ ಮಿಕ್ಕ ಇಲಿಗಳನ್ನು ಮುಂದೆ ಮಾಡಿಕೊಂಡು ತಾನು ಕಡೆಗಾದನು. ಸೃಗಾಲವು ಅವನ ಮೇಲೆ ಹಾರಿತು. ಬೋಧಿ ಸತ್ವನು, ಸೃಗಾಲವು ತನ್ನನ್ನು ಹಿಡಿಯಲು ಹಾರುವುದನ್ನು ಕಂಡು, "ಭೋ ಸೃಗಾಲ, ಈ ನಿನ್ನ ಗಾಳಿ ತೆಗೆದುಕೊಳ್ಳುವಿಕೆಯು ಧರ್ಮಕ್ಕಾಗಿ ಯಲ್ಲ. ಇತರರನ್ನು ಹಿಂಸಿಸುವುದಕ್ಕಾಗಿ ಧರ್ಮವನ್ನು ಧ್ವಜ ಮಾಡಿ ಕೊಂಡು ತಿರುಗುತ್ತಿದ್ದೀಯೆ" ಎಂದು ಹೇಳಿ, ಈ ಗಾಹೆ ಹೇಳಿದನು :

"ಧರ್ಮವನ್ನು ಧ್ವಜ ಮಾಡಿಕೊಂಡು, ಗುಟ್ಟಾಗಿ ಪಾಪವಾಚರಿಸಿ, ಲೋಕದಲ್ಲಿ ಇರುವವರಲ್ಲಿ ವಿಶ್ವಾಸವುಂಟುಮಾಡುವುದಕ್ಕೆ "ಬಿಡಾಲವ್ರತ"ವೆಂದು ಹೆಸರು."

ಮೂಷಿಕರಾಜನು ಹೀಗೆ ಮಾತನಾಡುತ್ತಲೇ ಅದರ ಮೇಲೆ ಎದ್ದು ಅದರ ಕತ್ತಮೇಲೆ ಬಿದ್ದು ವಸಡಿನ ಅಡಿಗಂಟಲೊಳಗಿನ ನಾಳವನ್ನು ಕಚ್ಚಿ, ಗಂಟಲನಾಳವನ್ನು ಸೀಳಿ ಸಾಯಿಸಿತು. ಇಲಿಗಳ ಗುಂಪು ಹಿಂದಿರುಗಿ ಸೃಗಾಲವನ್ನು ಮುರಮುರಾಯೆಂದು ತಿಂದು ಹೋದವು. ಮೊದಲು ಬಂದವಕ್ಕೆ ಮಾಂಸ ಸಿಕ್ಕಿತು, ಬಳಿಕ ಬಂದವಕ್ಕೆ ಸಿಕ್ಕಲಿಲ್ಲ. ಅಂದಿನಿಂದ ಇಲಿಗಳ ಗುಂಪಿಗೆ ನಿರ್ಭಯವಾಯಿತು.

## ಸುಹನು ಜಾತಕ (೧೫೮)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಅವನ ಸರ್ವಾರ್ಥಕನೂ ಅರ್ಥಧರ್ಮಗಳನ್ನು ಅನುಶಾಸನೆ ಮಾಡುವ ಅಮಾತ್ಯನೂ ಆಗಿದ್ದನು. ಆ ರಾಜನು ಕೊಂಚ ಧನಲೋಭದ ಪ್ರಕೃತಿಯುವನು. ಅವನ ಬಳಿ ಮಹಾಶೋಣವೆಂಬ ತುಂಟ ಕುದುರೆಯಿತ್ತು. ಆಗ, ಉತ್ತರಾಪಥದ ಕುದುರೆವ್ಯಾಪಾರಿಗಳು ಐನೂರು ಕುದುರೆಗಳನ್ನು ತಂದರು ; ಕುದುರೆಗಳು ಬಂದುದನ್ನು ರಾಜನಿಗೆ ತಿಳಿಸಿದರು. ಅದಕ್ಕೆ ಮೊದಲು ಬೋಧಿಸತ್ವನು ಕುದುರೆಗಳಿಗೆ ಬೆಲೆಕಟ್ಟಿ, ಬೆಲೆಯನ್ನು ಕಡಮೆಮಾಡದೆ ಕೊಡಿಸುತ್ತಿದ್ದನು. ರಾಜನು ಅದಕ್ಕಾಗಿ ಅವನನ್ನು ಸಹಿಸದೆ, ಬೇರೆ ಅಮಾತ್ಯನನ್ನು ಕರೆದು "ಅಯ್ಯಾ, ಕುದುರೆಗಳಿಗೆ ಬೆಲೆಕಟ್ಟು. ಬೆಲೆ ಕಟ್ಟಿ, ಮೊದಲು ಮಹಾಶೋಣವನ್ನು ಆ ಕುದುರೆಗಳ ನಡುವೆ ಹೋಗುವಂತೆ ಬಿಡು. ಕುದುರೆಗಳನ್ನು ಕಡಿಯಿಸಿ ಗಾಯಗೊಳಿಸಿ, ಅವು ದುರ್ಬಲವಾದಾಗ ಬೆಲೆಯನ್ನು ಇಳಿಸಿಬಿಡು" ಎಂದನು. ಅವನು ಒಳ್ಳೆಯುದೆಂದು ಒಪ್ಪಿ, ಹಾಗೆಯೆ ಮಾಡಿದನು.

ಕುದುರೆಯ ವ್ಯಾಪಾರಿಗಳು ಖಿನ್ನರಾಗಿ ಅವನು ಮಾಡಿದ ಕಾರ್ಯವನ್ನು ಬೋಧಿಸತ್ವನಿಗೆ ತಿಳಿಸಿದರು. ಬೋಧಿಸತ್ವನು "ನಿಮ್ಮ ನಗರದಲ್ಲಿ ತುಂಟ ಕುದುರೆಯಿಲ್ಲವೆ ?" ಎಂದು ಕೇಳಿದನು. "ಸುಹನುವೆಂಬ ತುಂಟ ಕುದುರೆ, ಚಂಡವಾದದ್ದು, ಪರುಷವಾದದ್ದು, ಉಂಟು ಸ್ವಾಮಿ" ಎಂದು ಅವರು ಹೇಳಲು, "ಹಾಗಾದರೆ ಪುನಃ ಬರುವಾಗ ಆ ಕುದುರೆಯನ್ನು ಕರೆತನ್ನಿರಿ" ಎಂದು ಬೋಧಿಸತ್ವನು ಹೇಳಿದುದಕ್ಕೆ ಅವರು ಸಮ್ಮತಿಸಿ ಬರುವಾಗ ಆ ತುಂಟ ಕುದುರೆಯನ್ನು ಹಿಡಿದುಕೊಂಡು ಬಂದರು.

ಕುದುರೆಯ ವ್ಯಾಪಾರಿಗಳು ಬಂದುದನ್ನು ಕೇಳಿ ರಾಜನು ಸಿಂಹಪಂಜರ(ಕಿಟಕಿ)ವನ್ನು ಬಿಚ್ಚಿ, ಕುದುರೆಗಳನ್ನು ಕುರಿತು ನೋಡಿ ಮಹಾಶೋಣವನ್ನು ಬಿಡಿಸಿದನು. ವ್ಯಾಪಾರಿಗಳು, ಮಹಾಶೋಣ ಬರುವುದನ್ನು ಕಂಡು ಸುಹನುವನ್ನು ಬಿಟ್ಟರು. ಅವು ಒಂದನ್ನೊಂದು ಬಳಿಸಾರಿ, ಪರಸ್ಪರ ಮೈನೆಕ್ಕುತ್ತ ನಿಂತವು.

ರಾಜನು ಬೋಧಿಸತ್ವನನ್ನು ಕುರಿತು "ಗೆಳೆಯ, ಈ ಎರಡು ತುಂಟ ಕುದುರೆಗಳು ಇತರರೊಡನೆ ಚಂಡವಾಗಿ ಪರುಷವಾಗಿ ಸಾಹಸದೊಡನೆ ವ್ಯವಹರಿಸುವುವು. ಇತರ ಕುದುರೆಗಳನ್ನು ಕಚ್ಚಿ ಗಾಯವುಂಟುಮಾಡುವುವು. ಆದರೆ ಒಂದರೊಡನೊಂದು ವೈನೆಕ್ಕುತ್ತ ಒಕ್ಕಟ್ಟಿನಿಂದ ನಿಂತಿವೆ. ಇದು ಏಕೆ?" ಎಂದನು.

ಬೋಧಿಸತ್ವನು "ಇವುಗಳ ಶೀಲ ಬೇರೆ ಬೇರೆಯಲ್ಲ, ಮಹಾರಾಜ. ಇವು ಶೀಲದಲ್ಲೂ ಸ್ವಭಾವದಲ್ಲೂ ಒಂದೇ ಆಗಿವೆ" ಎಂದು ಹೇಳುತ್ತ ಈ ಎರಡು ಗಾಹೆಗಳನ್ನು ಹೇಳಿದನು:

"ಶೋಣ ಸುಹನುಗಳ ಶೀಲ ಬೇರೆ ಬೇರೆಯಲ್ಲ.
ಸುಹನುವಿನಂತೆಯೇ ಶೋಣ. ಎರಡರ ಗಮನವೂ ಒಂದೇ.
ಒರಟುತನದಿಂದ, ಕೆಟ್ಟಬುದ್ಧಿಯಿಂದ, ಸದಾ ಕಟ್ಟನ್ನು ಕಡಿಯುವುವು.
(ಆದರೆ) ಪಾಪದಿಂದ ಪಾಪವೂ, ಕೆಟ್ಟದ್ದರಿಂದ ಕೆಟ್ಟದ್ದೂ ಶಮನವಾಗುವದು."

ಹೀಗೆ ಹೇಳಿ, ಬೋಧಿಸತ್ವನು "ರಾಜನೆಂಬವನು ಅಭಿಲುಬ್ಧನಾಗುವುದು ತಕ್ಕುದಲ್ಲ; ಇತರರ ಸ್ವತ್ತನ್ನು ನಾಶಮಾಡುವುದು ಸರಿಯಲ್ಲ" ಎಂದು ರಾಜನಿಗೆ ಬುದ್ಧಿಹೇಳಿ, ಕುದುರೆಗಳಿಗೆ ಬೆಲೆ ಕಟ್ಟಿಸಿ, ಮೊದಲಿನಂತೆ ಬೆಲೆ ಕೊಡಿಸಿದನು.

ಕುದುರೆಯ ವ್ಯಾಪಾರಿಗಳು ಎಂದಿನಂತೆ ಬೆಲೆ ಪಡೆದು ಹರ್ಷತೃಪ್ತಿಗಳಿಂದ ಹೋದರು. ರಾಜನು ಕೂಡ ಬೋಧಿಸತ್ವನ ಬುದ್ಧಿವಾದದಲ್ಲಿ ನಿಂತು, ತನ್ನ ಕರ್ಮಕ್ಕೆ ತಕ್ಕಂತೆ ಹೋದನು.

## ಸಿಂಹಚರ್ಮ ಜಾತಕ (೧೮೯)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಕೃಷಿಕಕುಲದಲ್ಲಿ ಹುಟ್ಟಿ, ವಯಸ್ಸು ಬಂದ ಮೇಲೆ ಕೃಷಿಕರ್ಮದಿಂದ ಜೀವಿಸುತ್ತಿದ್ದನು.



**ಶಿಂಶುಮಾರ ಜಾತಕ (೨೦೮)** [ಪುಟ ೧೭

(Copyright : Director, Archæological Survey in Netherlands, India)

(Courtesy : Dr. A. Venkatasubbiah, M.A., Ph.D., LL.B.)



**ಶಿಂಶುಮಾರ ಜಾತಕ (೨೦೮)** [ಪುಟ ೧೭

(ಶಿವಮೊಗ್ಗಾ ಡಿಸ್ಟ್ರಿಕ್ಟಿನ ಬಳ್ಳಿಗಾವೆ ಗ್ರಾಮದಿಂದ)

(Photo: Sri P. Srinivasa Rao, M.sc.)

ಆ ಕಾಲದಲ್ಲಿ ಒಬ್ಬ ವ್ಯಾಪಾರಿಯು ಕತ್ತೆಯ ಮೇಲೆ ಭಾರ ಹೊರಿಸಿ ವ್ಯವಹಾರ ಮಾಡುತ್ತ ತಿರುಗಾಡುತ್ತಿದ್ದನು. ಅವನು ಹೋದ ಹೋದ ಕಡೆ ಕತ್ತೆಯ ಬೆನ್ನಿನಿಂದ ವಸ್ತುಗಳನ್ನು ಇಳಿಸಿ, ಕತ್ತೆಗೆ ಸಿಂಹ ಚರ್ಮ ಹೊದಿಸಿ, ಬತ್ತ ಜವೆಗಳ ಗದ್ದೆಗೆ ಬಿಡುತ್ತಿದ್ದನು. ಗದ್ದೆಯ ಕಾವಲವರು ಅದನ್ನು ಕಂಡು ಸಿಂಹವೆಂದು ತಿಳಿದು ಹತ್ತಿರ ಬರುತ್ತಿರಲಿಲ್ಲ.

ಆಗ, ಒಂದು ದಿವಸ ಆ ವ್ಯಾಪಾರಿಯು ಒಂದಾನೊಂದು ಗ್ರಾಮದ ಬಾಗಿಲಲ್ಲಿ ತಂಗಿ, ಬೆಳಗಿನ ಊಟವನ್ನು ಬೇಯಿಸುತ್ತಿರುವಾಗ, ಕತ್ತೆಗೆ ಸಿಂಹ ಚರ್ಮ ಹೊದಿಸಿ ಜವೆಯ ಗದ್ದೆಗೆ ಬಿಟ್ಟನು. ಗದ್ದೆಯ ಕಾವಲಿನವರು ಅದು ಸಿಂಹವೆಂದು ತಿಳಿದು, ಹತ್ತಿರ ಹೋಗಲಾರದೆ ಮನೆಗೆ ಹೋಗಿ ತಿಳಿಸಿದರು. ಗ್ರಾಮದವರೆಲ್ಲರೂ ಆಯುಧಗಳನ್ನು ಹಿಡಿದು ಶಂಖಗಳನ್ನು ಊದುತ್ತ, ಭೇರಿಗಳನ್ನು ಬಡಿಯುತ್ತ ಗದ್ದೆಯ ಬಳಿ ಹೋಗಿ ಕೂಗಾಡಿದರು. ಕತ್ತೆ ಮರಣ ಭಯದಿಂದ ಹೆದರಿ ಕತ್ತೆಕೂಗು ಕೂಗಿತು.

ಆಗ, ಅದರ ಕತ್ತೆತನವನ್ನು ತಿಳಿದು ಬೋಧಿಸತ್ವನು

"ಇದು ಸಿಂಹದ ಕೂಗಲ್ಲ, ಹುಲಿಯದಲ್ಲ, ಚಿರತೆಯದಲ್ಲ. ಸಿಂಹ ಚರ್ಮ ಹೊದೆದ ಪಾಪಿ ಕತ್ತೆ ಕೂಗುವ ಕೂಗು"

ಎಂದು ಮೊದಲ ಗಾಹೆ ಹೇಳಿದನು.

ಗ್ರಾಮದವರು ಕೂಡ ಅದರ ಕತ್ತೆತನವನ್ನು ತಿಳಿದು, ಮೂಳೆ ಮುರಿಯ ಬಡಿದು, ಸಿಂಹಚರ್ಮವನ್ನು ತೆಗೆದುಕೊಂಡು ಹೋದರು. ಆಗ ಆ ವ್ಯಾಪಾರಿಯು ಬಂದು ಆ ವ್ಯಸನಗೊಂಡ ಕತ್ತೆಯನ್ನು ಕಂಡು

"ಕತ್ತೆಯು ಸಿಂಹಚರ್ಮವನ್ನು ಹೊದೆದು ಹಸುರು ಜವೆಯನ್ನು ಚಿರ ಕಾಲ ತಿನ್ನಬಹುದಾಗಿತ್ತು. ಆದರೆ ಕೂಗಿ ಕೆಟ್ಟಿತು."

ಎಂದು ಎರಡನೆಯ ಗಾಹೆ ಹೇಳಿದನು. ಅವನು ಹೀಗೆ ಹೇಳುತ್ತಿರುವಾಗಲೇ ಕತ್ತೆ ಅಲ್ಲಿಯೇ ಸತ್ತುಬಿದ್ದಿತು. ವ್ಯಾಪಾರಿಯು ಅದನ್ನು ಬಿಟ್ಟು ಹೊರಟು ಹೋದನು.

## ಗಾಂಗೇಯ ಜಾತಕ (೨೦೫)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಗಂಗಾತೀರದಲ್ಲಿ ವೃಕ್ಷದೇವತೆಯಾಗಿದ್ದನು.

ಆಗ ಗಂಗೆ ಯಮುನೆಗಳ ಸಂಗಮಸ್ಥಾನದಲ್ಲಿ ಗಾಂಗೇಯ ಮತ್ತು ಯಾಮುನೇಯ ಎಂಬ ಎರಡು ಮೀನುಗಳು "ನಾನು ಚೆನ್ನಾಗಿದ್ದೇನೆ, ನೀನು ಚೆನ್ನಾಗಿದ್ದೀಯೆ" ಎಂದು ತಮ್ಮ ತಮ್ಮ ರೂಪವನ್ನು ಕುರಿತು ವಿವಾದಮಾಡುತ್ತ, ಕೊಂಚ ದೂರದಲ್ಲಿ ಗಂಗೆಯ ದಡದಲ್ಲಿ ಆಮೆ ಮಲಗಿರುವುದನ್ನು ಕಂಡು, "ನಾವು ಚೆನ್ನಾಗಿರುವುದೂ ಚೆನ್ನಾಗಿಲ್ಲದಿರುವುದೂ ಇದಕ್ಕೆ ಗೊತ್ತು" ಎಂದು ಅದರ ಬಳಿ ಹೋಗಿ, "ಏನಯ್ಯ, ಆಮೆ? ಗಾಂಗೇಯನು ಚೆನ್ನಾಗಿರುವನೆ, ಅಥವಾ ಯಾಮುನೇಯನೆ?" ಎಂದು ಕೇಳಿದವು.

ಆಮೆಯು "ಗಾಂಗೇಯನೂ ಚೆನ್ನಾಗಿದ್ದಾನೆ. ಯಾಮುನೇಯನೂ ಚೆನ್ನಾಗಿದ್ದಾನೆ. ಆದರೆ ನಿಮ್ಮಿಬ್ಬರಿಗಿಂತ ನಾನೇ ಅತಿ ಹೆಚ್ಚಾಗಿ ಚೆನ್ನಾಗಿದ್ದೇನೆ" ಎಂದು ಈ ಅರ್ಥವನ್ನು ಬೆಳಗಲು

"ಗಂಗೆಯ ಮೀನುಗಳು ಚೆನ್ನಾಗಿವೆ. ಯಮುನೆಯವೂ ಚೆನ್ನಾಗಿವೆ. ಆದರೆ ನಾಲ್ಕು ಕಾಲಿನ ಇವನು, ಹರಡಿದ ನ್ಯಗ್ರೋಧಮಂಡಲದಂತವನು, ಕೋಲಿನಂತಹ ಉದ್ದ ಕತ್ತಿನವನು, ಎಲ್ಲರಿಗಿಂತ ಹೆಚ್ಚು ಚೆನ್ನಾಗಿದ್ದಾನೆ"
ಎಂದು ಮೊದಲ ಗಾಹೆ ಹೇಳಿತು.

ಮೀನುಗಳು ಆ ಮಾತು ಕೇಳಿ "ಎಲಾ ಪಾಪಿ ಆಮೆ! ನಾವು ಕೇಳಿದುದಕ್ಕೆ ಹೇಳದೆ ಬೇರೇನೋ ಹೇಳುವೆ!" ಎಂದು ಹೇಳಿ

"ಕೇಳಿದುದಕ್ಕೆ ಹೇಳಲಿಲ್ಲ. ಕೇಳಿದರೆ ಬೇರೆ ಹೇಳುತ್ತದೆ. ತನ್ನನ್ನು ಹೊಗಳಿಕೊಳ್ಳುವ ಇದು ನಮಗೆ ಸರಿಬರುವುದಿಲ್ಲ"
ಎಂದು ಎರಡನೆಯ ಗಾಹೆ ಹೇಳಿದುವು.

## ಕುರಂಗಮೃಗ ಜಾತಕ (೨೦೬)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಕುರಂಗಮೃಗವಾಗಿ ಕಾಡಿನಲ್ಲಿ ಒಂದು ಕೊಳದ ಬಳಿಯ ಪೊದೆಯಲ್ಲಿ ವಾಸವಾಗಿದ್ದನು. ಅದೇ ಕೊಳದ ಬಳಿ ಒಂದು ಮರದ ತುದಿಯಲ್ಲಿ ಶತಪತ್ರವೆಂಬ ಹಕ್ಕಿ ಕುಳಿತಿತ್ತು. ಕೊಳದಲ್ಲಿ ಒಂದು ಆಮೆ ವಾಸವಾಗಿತ್ತು. ಹೀಗೆ ಅವು ಮೂರೂ ಸಂಗಡಿಗರಾಗಿ ಒಂದರೊಡನೊಂದು ಪ್ರಿಯವಾಗಿ ಕೂಡಿ ವಾಸಿಸುತ್ತಿದ್ದವು.

ಆಗ ಜಿಂಕೆಗಳನ್ನು ಹಿಡಿಯುವ ಬೇಡನೊಬ್ಬನು ಕಾಡಿನಲ್ಲಿ ತಿರುಗುತ್ತ, ನೀರಿಗೆ ಇಳಿಯುವ ಕಡೆ ಬೋಧಿಸತ್ವನ ಹೆಜ್ಜೆಗುರುತನ್ನು ಕಂಡು, ಲೋಹದ ಸಂಕೋಲೆಗೆ ಸಮನಾದ ಚಕ್ಕಳದ ಪಾಶವನ್ನು ಒಡ್ಡಿ ಹೋದನು. ಬೋಧಿಸತ್ವನು ನೀರು ಕುಡಿಯಲು ಬಂದು, ಮೊದಲ ಜಾವದಲ್ಲಿಯೇ ಪಾಶಕ್ಕೆ ಸಿಕ್ಕಿ ಸಿಕ್ಕಿಬಿದ್ದ ಕೂಗನ್ನು ಕೂಗಿದನು. ಆ ಶಬ್ದವನ್ನು ಕೇಳಿ ಮರದಿಂದ ಶತಪತ್ರವೂ ನೀರಿನಿಂದ ಆಮೆಯೂ ಬಂದು, ಏನು ಮಾಡತಕ್ಕದೆಂದು ಮಂತ್ರಾಲೋಚನೆ ಮಾಡಿದವು.

ಆಗ ಶತಪತ್ರವು ಆಮೆಯನ್ನು ಕರೆದು "ಅಯ್ಯಾ, ನಿನಗೆ ಹಲ್ಲುಗಳಿವೆ. ನೀನು ಈ ಪಾಶವನ್ನು ಕತ್ತರಿಸು. ನಾನು ಹೋಗಿ ಅವನು ಬಾರದಂತೆ ಮಾಡುವೆನು ಹೀಗೆ ನಮ್ಮಿಬ್ಬರ ಪರಾಕ್ರಮದಿಂದ ಈ ಗೆಳೆಯನ ಜೀವ ಉಳಿಯುವುದು" ಎಂದು ಈ ಅರ್ಥವನ್ನು ಬೆಳಗಲು ಮೊದಲ ಗಾಹೆ ಹೇಳಿತು :

"ಬಾ, ಆಮೆ. ಚಕ್ಕಳದ ಪಾಶವನ್ನು ಹಲ್ಲಿಂದ ಕತ್ತರಿಸು. ಬೇಡನು ಬರದೆ ನಿಲ್ಲುವಂತೆ ನಾನು ಮಾಡುತ್ತೇನೆ."

ಆಮೆಯು ಚರ್ಮದ ಹಗ್ಗವನ್ನು ಕಡಿಯತೊಡಗಿತು. ಶತಪತ್ರವು ಬೇಡನ ವಾಸದ ಹಳ್ಳಿಗೆ ಹೋಯಿತು.

ಬೇಡನು ಬೆಳಗಿನ ಜಾವದಲ್ಲಿಯೇ ಶಕ್ತ್ಯಾಯುಧವನ್ನು ಹಿಡಿದು ಹೊರಹೊರಟನು. ಹಕ್ಕಿಯು ಅವನ ಹೊರಡುವಿಕೆಯನ್ನು ತಿಳಿದು,

ಕಿರಿಚಿಕೊಂಡು ರೆಕ್ಕೆ ಬಡಿದು, ಅವನು ಮುಂಬಾಗಿಲಿನಿಂದ ಹೊರಡುವಾಗ ಮುಖದ ಮೇಲೆ ಹೊಡೆಯಿತು. ಬೇಡನು "ಈ ಅನಿಷ್ಟದ ಹಕ್ಕಿ ನನ್ನನ್ನು ಹೊಡೆಯಿತು" ಎಂದು ಹಿಂದಿರುಗಿ, ಕೊಂಚ ಮಲಗಿ, ಪುನಃ ಶಕ್ತಿಯನ್ನು ಹಿಡಿದು ಎದ್ದನು. ಹಕ್ಕಿಯು "ಇವನು ಮೊದಲು ಮುಂಬಾಗಿಲಿನಿಂದ ಹೊರಟನು. ಈಗ ಹಿಂಬಾಗಿಲಿನಿಂದ ಹೊರಡುವನು" ಎಂದು ತಿಳಿದು, ಹೋಗಿ ಮನೆಯ ಹಿಂದೆ ಕುಳಿತಿತು. ಬೇಡನು ಕೂಡ "ಮುಂಬಾಗಿಲಿನಿಂದ ಹೊರಟು, ನಾನು ಅನಿಷ್ಟದ ಹಕ್ಕಿಯನ್ನು ಕಂಡೆ. ಈಗ ಹಿಂಬಾಗಿಲಿನಿಂದ ಹೋಗುವೆನು" ಎಂದು ಹಿಂಬಾಗಿಲಿನಿಂದ ಹೊರಟನು. ಹಕ್ಕಿ ಪುನಃ ಕಿರಿಚಿಕೊಂಡು, ಹೋಗಿ ಅವನ ಮುಖದ ಮೇಲೆ ಹೊಡೆಯಿತು. ಬೇಡನು ಪುನಃ ಅದರಿಂದ ಏಟು ತಿಂದು, ಅದು ತನ್ನನ್ನು ಹೋಗಗೊಡದೆಂದು ತಿಳಿದು, ಹಿಂದಿರುಗಿ ಬಂದು, ಅರುಣನು ಬರುವವರೆಗೂ ಮಲಗಿ, ಅರುಣೋದಯದಲ್ಲಿ ಶಕ್ತಿ ಹಿಡಿದು ಹೊರಟನು.

ಆಗ ಹಕ್ಕಿಯು ಬೇಗ ಹೋಗಿ ಬೇಡನು ಬಂದುಬಿಡುವನೆಂದು ಬೋಧಿಸತ್ವನಿಗೆ ಹೇಳಿತು. ಆ ವೇಳೆಗೆ ಒಂದು ಎಳೆ ಹೊರತು ಉಳಿದ ಹಗ್ಗವನ್ನು ಆಮೆ ಕಚ್ಚಿತ್ತು. ಅದರ ಹಲ್ಲುಗಳು ಬಿದ್ದು ಹೋಗುವ ಹಾಗಾಗಿತ್ತು, ಬಾಯಿ ರಕ್ತಮಯವಾಗಿತ್ತು. ಬೇಡನು ಶಕ್ತಿಹಿಡಿದು ಮಿಂಚಿನ ವೇಗದಿಂದ ಬರುವುದನ್ನು ಬೋಧಿಸತ್ವನು ಕಂಡು ಆ ಎಳೆಯನ್ನು ಕಿತ್ತು ವನವನ್ನು ಹೊಕ್ಕನು. ಹಕ್ಕಿ ಮರದ ಮೇಲೆ ಕುಳಿತಿತು. ಆಮೆ ಬಲವಿಲ್ಲದೆ ಅಲ್ಲಿಯೆ ಮಲಗಿತು. ಬೇಡನು ಆಮೆಯನ್ನು ಹಸುಬೆಯಲ್ಲಿ ಎಸೆದು ಒಂದು ಮರದ ಬುಡಕ್ಕೆ ಸಿಕ್ಕಿಸಿದನು.

ಬೋಧಿಸತ್ವನು ಹಿಂದಿರುಗಿ ನೋಡಿ, ಬೇಡನು ಆಮೆಯನ್ನು ಹಿಡಿದುದು ಕಂಡು "ನನ್ನ ಸಂಗಡಿಗನಿಗೆ ಜೀವದಾನಮಾಡುತ್ತೇನೆ" ಎಂದು, ದುರ್ಬಲನಂತಾಗಿ ಬೇಡನ ಕಣ್ಣಿಗೆಬಿದ್ದಿತು. ಅವನು "ಇದು ದುರ್ಬಲವಾಗಿದೆ. ಇದನ್ನು ಸಾಯಿಸುವೆನು" ಎಂದು ಶಕ್ತಿಯನ್ನು ಕೊಂಡು ಅದನ್ನು ಹಿಂಬಾಲಿಸಿದನು. ಬೋಧಿಸತ್ವನು ಅವನಿಗೆ ಬಹು ದೂರವಾಗದೆ, ಬಹು ಹತ್ತಿರವೂ ಆಗದೆ ನಡೆದು, ಅವನನ್ನೂ ಕೊಂಡು

ಕಾಡನ್ನು ಹೊಕ್ಕನು. ದೂರ ಬಂದಿರುವುದನ್ನು ತಿಳಿದು, ದಾರಿತಪ್ಪಿಸಿ, ಬೇರೆ ಮಾರ್ಗದಲ್ಲಿ ಗಾಳಿಯವೇಗದಿಂದ ಹೋಗಿ, ಕೊಂಬಿನಿಂದ ಹಸುಬೆಯನ್ನು ಎತ್ತಿ ಬಿಸುಟು, ನೆಲದಲ್ಲಿ ಬೀಳಿಸಿ, ಹರಿದು, ಆಮೆಯನ್ನು ಹೊರಗೆ ಬಿಟ್ಟನು. ಶತಪತ್ರವೂ ಮರದಿಂದ ಕೆಳಗಿಳಿಯಿತು.

ಬೋಧಿಸತ್ವನು ಎರಡಕ್ಕೂ ಬುದ್ಧಿವಾದ ಕೊಡುತ್ತ "ನಾನು ನಿಮ್ಮನ್ನು ಆಶ್ರಯಿಸಿ ಬದುಕಿದೆ. ನೀವು ನನಗೆ ಗೆಳೆಯರ ಕರ್ತವ್ಯವನ್ನು ಮಾಡಿದಿರಿ. ಈಗ ಬೇಡನು ಬಂದು ನಿಮ್ಮನ್ನು ಹಿಡಿದಾನು. ಆದ್ದರಿಂದ, ಅಯ್ಯಾ ಶತಪತ್ರ, ನೀನು ನಿನ್ನ ಮಕ್ಕಳನ್ನು ಕೊಂಡು ಬೇರೆ ಕಡೆಗೆ ಹೋಗು. ನೀನು, ಅಯ್ಯಾ ಆಮೆ, ನೀರಿನೊಳಗೆ ಹೋಗು" ಎಂದನು. ಅವು ಹಾಗೆಯೇ ಮಾಡಿದವು.

ಗುರು ಅಭಿಸಂಬುದ್ಧನಾಗಿ ಎರಡನೆಯ ಗಾಹೆ ಹೇಳಿದನು: 'ಆಮೆ ನೀರನ್ನು ಹೊಕ್ಕಿತು. ಕುರಂಗವು ಕಾಡನ್ನು ಪ್ರವೇಶಿಸಿತು. ಶತಪತ್ರವು ಮರದ ತುದಿಯಿಂದ ದೂರವಾಗಿ ಮಕ್ಕಳನ್ನು ಒಯ್ದಿತು' ಎಂದು.

ಬೇಡನು ಆ ಸ್ಥಳಕ್ಕೆ ಬಂದು, ಏನನ್ನೂ ಕಾಣದೆ, ಹರಿದ ಹಸುಬೆಯನ್ನು ಹಿಡಿದು ಖಿನ್ನನಾಗಿ ಮನೆಗೆ ಹೋದನು. ಆ ಮೂವರು ಸಂಗಡಿಗರು ಜೀವವಿರುವವರೆಗೂ ವಿಶ್ವಾಸವನ್ನು ಮುರಿಯದೆ, ಅನಂತರ ತಮ್ಮ ಕರ್ಮಕ್ಕೆ ಅನುಸಾರವಾಗಿ ಹೋದರು.

## ಶಿಂಶುಮಾರ ಜಾತಕ (೨೦೮)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಹಿಮವಂತಪ್ರದೇಶದಲ್ಲಿ ಕಪಿಯಾಗಿ ಹುಟ್ಟಿದ್ದನು. ಅವನಿಗೆ ಆನೆಯ ಬಲವಿತ್ತು. ಕಷ್ಟಸಹಿಷ್ಣುವಾಗಿ, ಮಹಾಶರೀರನಾಗಿ, ಸೌಭಾಗ್ಯವಂತನಾಗಿ ಆತನು ಗಂಗೆಯು ತಿರುಗುವ ಕಡೆಯ ಕಾಡಿನಲ್ಲಿ ವಾಸಮಾಡುತ್ತಿದ್ದನು.

ಆಗ, ಗಂಗೆಯಲ್ಲಿ ಒಂದು ಮೊಸಳೆ ವಾಸವಾಗಿತ್ತು. ಅದರ ಹೆಂಡತಿ ಬೋಧಿಸತ್ವನ ಶರೀರವನ್ನು ಕಂಡು ಅದರ ಹೃದಯಮಾಂಸ ವನ್ನು ಬಯಸಿ "ಸ್ವಾಮಿ, ನಾನು ಈ ಕಪಿರಾಜನ ಹೃದಯಮಾಂಸ ವನ್ನು ತಿನ್ನಬಯಸುವೆನು" ಎಂದು ಮೊಸಳೆಗೆ ಹೇಳಿತು. "ಭದ್ರೆ, ನಾನು ಜಲದಲ್ಲಿರುವವನು, ಅದು ನೆಲದಲ್ಲಿರುವದು ಅದನ್ನು ನಾನು ಹೇಗೆ ಹಿಡಿಯಲಾದೀತು?" ಎಂದಿತು ಮೊಸಳೆ. "ಏನಾದರೂ ಉಪಾಯ ದಿಂದ ಹಿಡಿ. ಅದು ಸಿಕ್ಕದಿದ್ದರೆ ನಾನು ಸಾಯುವೆನು." "ಹಾಗಾದರೆ, ಹೆದರಬೇಡ. ಒಂದು ಉಪಾಯವುಂಟು. ಅದರ ಹೃದಯಮಾಂಸ ವನ್ನು ನಿನಗೆ ತಿನ್ನಿಸುವೆನು" ಎಂದು ಹೆಣ್ಣು ಮೊಸಳೆಯನ್ನು ಸಮಾಧಾನ ಪಡಿಸಿ, ಬೋಧಿಸತ್ವನು ಗಂಗೆಯಲ್ಲಿ ನೀರು ಕುಡಿಯುತ್ತ ಕುಳಿತ ಕಾಲ ದಲ್ಲಿ ಅದರ ಹತ್ತಿರ ಹೋಗಿ, "ವಾನರೇಂದ್ರ, ಈ ಪ್ರದೇಶದಲ್ಲಿ ಕಸು ಗಾಯಿಗಳನ್ನು ತಿನ್ನುತ್ತ ತಿರುಗಿದ ಸ್ಥಳದಲ್ಲಿಯೇ ಏಕೆ ತಿರುಗುವೆ? ಗಂಗೆಯ ಆಚೆ ಕಡೆ ಮಾವು ಲಬುಜ ಮೊದಲಾದ ಮಧುರಫಲಗಳಿಗೆ ಕೊನೆಯಿಲ್ಲ. ಅಲ್ಲಿಗೇಕೆ ಹೋಗಿ ಫಲಾಫಲಗಳನ್ನು ತಿನ್ನಲು ತೊಡಗ ವೊಲ್ಲೆ?" ಎಂದಿತು.

"ಕುಂಭೀಲರಾಜಾ, ಗಂಗೆಯಲ್ಲಿ ಮಹಾನೀರು. ವಿಸ್ತೀರ್ಣ ಹೆಚ್ಚು. ಹೇಗೆ ಅಲ್ಲಿ ಹೋಗಲಾದೀತು?"

"ಹೋಗುವುದಾದರೆ, ನಾನು ನಿನ್ನನ್ನು ನನ್ನ ಬೆನ್ನ ಮೇಲೇರಿಸಿ ಕೊಂಡು ಒಯ್ಯುವೆನು."

ಅದು ಅದರ ಮಾತನ್ನು ನಂಬಿ ಒಳ್ಳೆಯದೆಂದು ಒಪ್ಪಲು, "ಹಾಗಾದರೆ, ಬಾ. ನನ್ನ ಬೆನ್ನ ಮೇಲೇರು" ಎಂದು ಮೊಸಳೆ ಯೆಂದಿತು. ಕಪಿ ಅದರ ಬೆನ್ನ ಮೇಲೇರಿತು. ಮೊಸಳೆ ಕೊಂಚ ದೂರ ಒಯ್ದು ಅದನ್ನು ನೀರಿನಲ್ಲಿ ಮುಳುಗಿಸಿತು.

ಬೋಧಿಸತ್ವನು "ಅಯ್ಯ, ನೀರಿನಲ್ಲಿ ನನ್ನನ್ನು ಮುಳುಗಿಸುವೆ. ಇದೇಕೆ?" ಎಂದನು.

"ನಾಸು ನಿನ್ನನ್ನು ಧರ್ಮದಿಂದ ಧರ್ಮಕ್ಕಾಗಿ ಕೊಂಡುಹೋಗುತ್ತಿಲ್ಲ. ನನ್ನ ಹೆಂಡತಿಗೆ ನಿನ್ನ ಹೃದಯಮಾಂಸದ ಮೇಲೆ ಬಯಕೆ ಯೆದ್ದಿದೆ. ನಾನು ಅವಳಿಗೆ ನಿನ್ನ ಹೃದಯವನ್ನು ತಿನಿಸಬಯಸುವೆನು."

"ಅಯ್ಯಾ, ಹೇಳಿದುದು ಚೆನ್ನಾಗಿ ಹೇಳಿದೆ. ನಮ್ಮ ಹೃದಯಗಳು ಒಳಗಿದ್ದರೆ ಕೊಂಬೆಯ ತುದಿಗಳಲ್ಲಿ ತಿರುಗುವಾಗ ಅವು ಚೂರು ಚೂರಾದಾವು."

"ಹಾಗಾದರೆ, ಅವುಗಳನ್ನು ಎಲ್ಲಿ ಇಡುವಿರಿ?"

ಬೋಧಿಸತ್ವನು, ಕೊಂಚ ದೂರದಲ್ಲಿ ಒಂದು ಅತ್ತಿಯ ಗಿಡದ ಪಕ್ವವಾದ ಹಣ್ಣುಗಳ ಗೊಂಚಲನ್ನು ಕಾಣಿಸಿ "ನೋಡು, ನಮ್ಮ ಹೃದಯಗಳು ಆ ಅತ್ತಿಯ ಮರದಲ್ಲಿ ನೇತಾಡುತ್ತಿವೆ" ಎಂದನು.

"ನೀನು ನನಗೆ ನಿನ್ನ ಹೃದಯ ಕೊಟ್ಟರೆ ನಾನು ನಿನ್ನನ್ನು ಕೊಲ್ಲುವುದಿಲ್ಲ."

"ಹಾಗಾದರೆ, ನನ್ನನ್ನು ಅಲ್ಲಿಗೆ ಒಯ್ಯಿ. ನಿನಗೆ ಆ ವೃಕ್ಷದಲ್ಲಿ ಜೋಲಾಡುತ್ತಿರುವುದನ್ನು ಕೊಡುವೆನು."

ಮೊಸಳೆ ಅದನ್ನು ಅಲ್ಲಿಗೆ ಕೊಂಡುಹೋಯಿತು. ಬೋಧಿಸತ್ವನು ಅದರ ಬೆನ್ನಿನಿಂದ ಹಾರಿ ಅತ್ತಿಯಮರದಲ್ಲಿ ಕುಳಿತು, "ಅಯ್ಯಾ, ಪೆಚ್ಚು ಮೊಸಳೆ, ಪ್ರಾಣಿಗಳ ಹೃದಯಗಳು ಮರದ ತುದಿಯಲ್ಲಿ ಇರುವುವೆಂದು ತಿಳಿದೆಯಲ್ಲ! ನೀನು ಅಜ್ಞಾನಿ. ನಾಸು ನಿನಗೆ ಮೋಸಮಾಡಿದೆ. ನಿನ್ನ ಫಲಾಫಲಗಳು ಅಲ್ಲಿಯೇ ಇರಲಿ. ನಿನ್ನ ಶರೀರ ದೊಡ್ಡದೇ ಹೊರತು, ಪ್ರಜ್ಞೆ ನಿನಗಿಲ್ಲ" ಎಂದು ಹೇಳಿ ಆ ಅರ್ಥವನ್ನು ಬೆಳಗುತ್ತ ಈ ಗಾಹೆಗಳನ್ನು ಹೇಳಿದನು:

"ನೀರಿನ ಆಚೆ ಇರುವ ಮಾವು ನೇರಿಳೆ ಹಲಸುಗಳು—ಸಾಕು. ನನಗೆ ಈ ಅತ್ತಿಯಹಣ್ಣೇ ಮೇಲು. ನಿನ್ನ ಮೈ ದೊಡ್ಡದು; ಪ್ರಜ್ಞೆ ಆದಕ್ಕೆ ತಕ್ಕಂತಿಲ್ಲ. ಮೋಸ ಹೋದೆ, ಮೊಸಳೆ. ಸುಖವಿರುವ ಕಡೆಗೆ ಹೋಗು."

ಮೊಸಳೆಯು ಸಾವಿರ ಹಣವನ್ನು ಕಳೆದುಕೊಂಡಂತೆ ದುಃಖಿಸುತ್ತ ಮನಸ್ಸು ಕೆಟ್ಟು ಗೋಳಾಡುತ್ತ ತನ್ನ ಮನೆಗೆ ಹೋಯಿತು.

## ಕರ್ಕರ ಜಾತಕ (೨೦೯)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರುವಾಗ ಬೋಧಿಸತ್ವನು ಒಂದು ದಟ್ಟಡವಿಯಲ್ಲಿ ವೃಕ್ಷದೇವತೆಯಾಗಿದ್ದನು.

ಆಗ ಒಬ್ಬ ಹಕ್ಕಿಬೇಡನು ಒಂದು ದೀವದ ಹಕ್ಕಿಯನ್ನು ತಂದು, ಕೂದಲಿನಿಂದ ಮಾಡಿದ ಹಗ್ಗವನ್ನೂ ಕೋಲುಗಳನ್ನೂ ಹಿಡಿದು ಕಾಡಿನಲ್ಲಿ ಕಾಡು ಕೋಳಿಯನ್ನು ಹಿಡಿಯಲು ಹೋದನು. ಆಗ ಒಂದು ಮುದಿ ಕೋಳಿ ಓಡಿಹೋಗಿ ಕಾಡನ್ನು ಹೊಕ್ಕಿತು. ಅದು ಅವನ ಕೂದಲಿನ ಪಾಶಕ್ಕೆ ಸಿಗವೊಲ್ಲದೆ, ಕುಶಲತೆಯಿಂದ ತಪ್ಪಿಸಿಕೊಂಡು, ಎದ್ದು ಎದ್ದು ಕೂರುತ್ತಿತ್ತು. ಬೇಡನು ಚಿಗುರು ತುಂಬಿದ ಕೊಂಬೆಗಳಿಂದ ತನ್ನನ್ನು ಮುಚ್ಚಿಕೊಂಡು, ಪುನಃ ಪುನಃ ಕೋಲನ್ನೂ ಪಾಶವನ್ನೂ ಒಡ್ಡಿದನು. ಕೋಳಿಯು ಅವನನ್ನು ಲಜ್ಜೆಗೊಳಿಸಬಯಸಿ, ಮನುಷ್ಯರಂತೆ ಮಾತನಾಡುತ್ತ

"ಅಶ್ವಕರ್ಣ, ವಿಭೀತಕ ಮುಂತಾದ ವೃಕ್ಷಗಳನ್ನು ಕಾಡಿನಲ್ಲಿ ಕಂಡಿದ್ದೇನೆ.
ಆದರೆ, ಮರವೆ, ನೀನು ನಡೆಯುವಂತೆ ಅವು ನಡೆಯಲಾರವು"

ಎಂದು ಮೊದಲ ಗಾಹೆ ಹೇಳಿತು.

ಹೀಗೆಂದು, ಪುನಃ ಆ ಕೋಳಿಯು ಬೇರೆ ಕಡೆ ಓಡಿಹೋಯಿತು. ಅದು ಓಡಿಹೋಗುವಾಗ, ಬೇಡನು

"ಈ ಹಳೆಯ ಕೋಳಿ ಪಂಜರವನ್ನು ಮುರಿದು ಬಂದದ್ದು. ಕುಶಲಿಯಾಗಿ ಕೂದಲಿನ ಪಾಶದಿಂದ ತಪ್ಪಿಸಿಕೊಂಡು ಮಾತನಾಡುವುದು"

ಎಂದು ಎರಡನೆಯ ಗಾಹೆ ಹೇಳಿದನು. ಹೀಗೆಂದು, ಬೇಡನು ಕಾಡಿನಲ್ಲಿ ತಿರುಗಿ, ಸಿಕ್ಕಿದಷ್ಟನ್ನು ಕೊಂಡು ಮನೆಗೆ ಹೋದನು.

## ಕಂದಗಲಕ ಜಾತಕ (೨೧೦)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ ಬೋಧಿಸತ್ವನು ಹಿಮವಂತಪ್ರದೇಶದಲ್ಲಿ ಮರಕುಟಿಕ ಹಕ್ಕಿಯಾಗಿ ಹುಟ್ಟಿ, ದನು. ಖದಿರವನದಲ್ಲಿಯೇ ಆಹಾರ ಹಿಡಿಯುತ್ತಿದ್ದುದರಿಂದ ಅವನಿಗೆ ಖದಿರವನಿಕನೆಂದು ಹೆಸರಾಯಿತು. ಆವನಿಗೆ ಕಂದಗಲಕನೆಂಬ ಹಕ್ಕಿ ಸಂಗಡಿಗನಾಯಿತು. ಆ ಹಕ್ಕಿ ಹಣ್ಣು ತುಂಬಿದ ವನದಲ್ಲಿ ಆಹಾರ ಕೊಳ್ಳುತ್ತಿತ್ತು. ಅದು ಒಂದು ದಿನ ಖದಿರವನಿಕನ ಬಳಿ ಹೋಯಿತು.

ಖದಿರವನಿಕನು ಸಂಗಡಿಗನು ಬಂದನೆಂದು ಕಂದಗಲಕನನ್ನು ಕೊಂಡು ಖದಿರವನವನ್ನು ಹೊಕ್ಕು ಖದಿರಮರಗಳ ನ್ಯೈಯನ್ನು ಕೊಕ್ಕಿನಿಂದ ಹೊಡೆದು, ಮರದಿಂದ ಸಣ್ಣ ಪ್ರಾಣಿಗಳನ್ನು ಹೊರಗೆಳೆದು ಕಂದಗಲಕನಿಗೆ ಕೊಟ್ಟನು. ಕೊಟ್ಟುಕೊಟ್ಟಂತೆ ಕಂದಗಲಕನು ಅವನ್ನು ಸಿಹಿಯಾದ ಕಜ್ಜಾಯದಂತೆ ಮುರಿದು ತಿಂದಿತು. ಹಾಗೆ ತಿನ್ನುತ್ತ "ಇದು ಮರಕುಟಿಕನಾಗಿ ಹುಟ್ಟಿದರೆ, ನಾನೂ ಹಾಗೆಯೆ. ಇದು ಕೊಡುವ ಆಹಾರ ನನಗೇಕೆ? ನಾನೇ ಖದಿರವನದಲ್ಲಿ ಆಹಾರ ಕೊಳ್ಳುವೆನು" ಎಂದು ಅದಕ್ಕೆ ಅಭಿಮಾನ ಹುಟ್ಟಿತು. ಆಗ ಅದು "ಅಯ್ಯಾ, ನಿನಗೆ ಕಷ್ಟ ಬೇಡ ಖದಿರವನದಲ್ಲಿ ನಾನೇ ಆಹಾರ ಕೊಳ್ಳುವೆನು" ಎಂದು ಖದಿರವನಿಕನಿಗೆಂದಿತು. ಆಗ "ಅಯ್ಯಾ, ನೀನು ಸಿಂಬಲಿ ಪರಿಭದ್ರಕ ಮೊದಲಾದ ನಿಸ್ಸಾರವಾದ ಮರಗಳ ವನದಲ್ಲಿ ಆಹಾರ ಹಿಡಿಯುವ ಕುಲದಲ್ಲಿ ಹುಟ್ಟಿದವನು. ಆದರೆ ಖದಿರವೆಂಬುದು ಸಾರವತ್ತಾದುದು, ಗಟ್ಟಿಯಾದುದು" ಎಂದು ಹೇಳಿ, "ಹಾಗೆ ಮಾಡಬೇಡ"ವೆಂದರೂ "ಏನು, ನಾನೂ ಮರಕುಟಿಕನ ಹೊಟ್ಟೆಯಲ್ಲಿ ಹುಟ್ಟಿಲ್ಲವೆ?" ಎಂದು ಅದರ ಮಾತನ್ನು ಕೇಳದೆ ವೇಗದಿಂದ ಹೋಗಿ ಖದಿರವೃಕ್ಷವನ್ನು ಕೊಕ್ಕಿನಿಂದ ಹೊಡೆಯಿತು. ಆಗಲೇ ಅದರ ಕೊಕ್ಕು ಮುರಿಯಿತು. ಕಣ್ಣುಗಳು ಹೊರಹೊರಟು ಬೀಳುವಂತಾದವು. ಅದರ ತಲೆ ಒಡೆಯಿತು. ಅದು ಮರದಲ್ಲಿ ನಿಲ್ಲಲಾರದೆ, ನೆಲದಲ್ಲಿ ಬಿದ್ದು,

"ಈ ಮರದ ಎಲೆ ತಣ್ಣಗಿದೆ. ಇದರಲ್ಲಿ ಮುಳ್ಳಿದೆ. ಒಂದೇ ಏಟಿಗೆ ನನ್ನ ತಲೆ ಕೊಕ್ಕುಗಳನ್ನು ಮುರಿದ ಇದರ ಹೆಸರೇನು ?"
ಎಂದು ಮೊದಲ ಗಾಹೆ ಹೇಳಿತು. ಅದನ್ನು ಕೇಳಿ ಖದಿರವನಿಕನು

"ಇದು ಸಾರವಿಲ್ಲದ ವೃಕ್ಷಗಳನ್ನು ಮುರಿಯುತ್ತ ತಿರುಗುತ್ತಿತ್ತು. ಆದರೆ, ಸಾರವತ್ತಾದ ಖದಿರವನ್ನು ಸಮೀಪಿಸಿದಾಗ, ಅಲ್ಲಿ ದೊಡ್ಡ ಹಕ್ಕಿಯು ತಲೆ ಯೊಡೆಯಿತು"
ಎಂದು ಎರಡನೆಯ ಗಾಹೆ ಹೇಳಿ, "ಭೋ ಕಂದಗಲಕ, ನಿನ್ನ ತಲೆ ಎಲ್ಲಿ ಒಡೆಯಿತೋ ಅದೇ ಖದಿರವೆಂಬ ಸಾರವತ್ತಾದ ವೃಕ್ಷ" ಎಂದನು. ಕಂದಗಲಕನು ಅಲ್ಲಿಯೇ ಪ್ರಾಣ ಬಿಟ್ಟಿತು.

## ಕಚ್ಛಪಜಾತಕ (೨೧೫)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಅಮಾತ್ಯಕುಲದಲ್ಲಿ ಹುಟ್ಟಿ, ವಯಸ್ಸು ಬಂದಮೇಲೆ ಅವನಿಗೆ ಅರ್ಥ ಧರ್ಮಗಳನ್ನು ಅನುಶಾಸಿಸುವವನಾದನು. ಆ ರಾಜನು ಬಹು ಮಾತನಾಡುತ್ತಿದ್ದನು. ಅವನು ಮಾತನಾಡುವಾಗ ಇತರರ ಮಾತಿಗೆ ಅವಕಾಶವೆಂಬುದೇ ಇರಲಿಲ್ಲ. ಬೋಧಿಸತ್ವನು ಅವನ ಆ ಬಹುಮಾತುಗಾರಿಕೆಯನ್ನು ಹೋಗಲಾಡಿಸಬಯಸಿ ಒಂದು ಉಪಾಯ ಕ್ಕಾಗಿ ಕಾಯುತ್ತಿದ್ದನು.

ಆ ಕಾಲದಲ್ಲಿ ಹಿಮವಂತಪ್ರದೇಶದ ಒಂದು ಸರಸ್ಸಿನಲ್ಲಿ ಒಂದು ಆಮೆಯಿತ್ತು. ಎರಡು ಮರಿಹಂಸಗಳು ಆಹಾರಕ್ಕಾಗಿ ತಿರುಗಾಡುತ್ತ ಅದರೊಡನೆ ವಿಶ್ವಾಸ ಮಾಡಿದವು. ಅವುಗಳ ವಿಶ್ವಾಸ ದೃಢವಾಗಲು, ಅವು ಒಂದು ದಿನ ಆಮೆಯನ್ನು ಕುರಿತು "ಅಯ್ಯಾ ಆಮೆ, ನಾವು ಹಿಮ ವಂತದಲ್ಲಿ ಚಿತ್ರಕೂಟಪರ್ವತತಲದ ಕಾಂಚನ ಗುಹೆಯಲ್ಲಿ ವಾಸಿಸುವ ಸ್ಥಾನವು ರಮಣೀಯುವಾದ ಪ್ರದೇಶ. ನಮ್ಮೊಡನೆ ಬರುವೆಯಾ ?" ಎಂದವು.

"ನಾನು ಏನು ಮಾಡಿದರೆ, ಹೋಗಲಾದೀತು?"

"ನಾವು ನಿನ್ನನ್ನು ಹಿಡಿದು ಕೊಂಡುಹೋಗುವೆವು. ನೀನು ಬಾಯನ್ನು ಕಾಪಾಡಿಕೊಂಡು ಯಾರೊಡನೆಯೂ ಏನೂ ಮಾತನಾಡದಿರ ಬಲ್ಲೆಯಾದರೆ—"

"ಕಾಪಾಡುವೆನು. ನನ್ನನ್ನು ಹಿಡಿದು ಕೊಂಡುಹೋಗಿರಿ."

ಅವು ಒಳ್ಳೆಯದೆಂದು ಹೇಳಿ, ಒಂದು ಕೋಲನ್ನು ಆಮೆಯಿಂದ ಕಚ್ಚಿಸಿ, ಅದರ ಎರಡು ತುದಿಗಳನ್ನು ತಾವು ಕಚ್ಚಿ ಆಕಾಶದಲ್ಲಿ ನೆಗೆದವು. ಅದನ್ನು ಹಂಸಗಳು ಹಾಗೆ ಒಯ್ಯುವುದನ್ನು ಗ್ರಾಮದ ಹುಡುಗರು ಕಂಡು "ಎರಡು ಹಂಸಗಳು ಆಮೆಯನ್ನು ಕೋಲಿನ ಸಹಾಯದಿಂದ ಒಯ್ಯುವವು" ಎಂದರು. ಆಮೆಯು "ನನ್ನ ಸಂಗಡಿಗರು ನನ್ನನ್ನು ಒಯ್ದರೆ, ನಿಮಗೇನು ಇಲ್ಲಿ? ಕೆಟ್ಟಹುಡುಗರಿರ!" ಎಂದು ಹೇಳಬಯಸಿ, ಹಂಸಗಳು ಶೀಘ್ರ ವೇಗದಿಂದ ವಾರಣಾಸಿನಗರದ ರಾಜನ ಅರಮನೆಯ ಮೇಲೆ ಬರುವ ವೇಳೆಗೆ ಹಲ್ಲುಗಳ ನಡುವಿನಿಂದ ಕೋಲನ್ನು ಬಿಟ್ಟು, ಹೊರ ಅಂಗಳದಲ್ಲಿ ಬಿದ್ದು ಎರಡು ಭಾಗವಾಯಿತು. ಆಗ "ಆಮೆ ಹೊರಅಂಗಳದಲ್ಲಿ ಬಿದ್ದು ಎರಡಾಗಿ ಒಡೆಯಿತು" ಎಂದು ಒಂದು ಕೋಲಾಹಲವಾಯಿತು.

ರಾಜನು ಬೋಧಿಸತ್ವನನ್ನು ಕರೆದುಕೊಂಡು ಅಮಾತ್ಯರ ಪರಿವಾರದೊಡನೆ ಆ ಸ್ಥಳಕ್ಕೆ ಹೋಗಿ ಆಮೆಯನ್ನು ನೋಡಿ, "ಪಂಡಿತ, ಇದು ಏನು ಮಾಡಿ ಬಿತ್ತು?" ಎಂದು ಬೋಧಿಸತ್ವನನ್ನು ಪ್ರಶ್ನಿಸಿದನು. ಬೋಧಿಸತ್ವನು "ರಾಜನಿಗೆ ಬುದ್ಧಿವಾದ ಹೇಳಬಯಸಿ ಬಹುಕಾಲದಿಂದ ಉಪಾಯ ಹುಡುಕುತ್ತ ಕಾದಿದ್ದೆ. ಈ ಆಮೆಗೆ ಹಂಸಗಳೊಡನೆ ವಿಶ್ವಾಸ ಬೆಳೆದಿರಬೇಕು; ಇದನ್ನು ಹಿಮವಂತಕ್ಕೆ ಒಯ್ಯೋಣವೆಂದು ಅವು ಇದರಿಂದ ಕೋಲು ಕಚ್ಚಿಸಿ ಆಕಾಶದಲ್ಲಿ ಹಾರಿರಬೇಕು. ಇದು ಯಾವುದಾದರೂ ಮಾತು ಕೇಳಿ, ಬಾಯಿ ತಡೆಯದೆ ಏನೋ ಹೇಳಬಯಸಿ ಕೋಲು ಬಿಟ್ಟಿರಬೇಕು. ಹೀಗೆ, ಆಕಾಶದಿಂದ ಬಿದ್ದು ಸತ್ತಿರಬೇಕು. ಇದೇ ನಡೆದಿರಬೇಕು" ಎಂದು ಚಿಂತಿಸಿ, "ಮಹಾರಾಜ,

ಅತಿ ಮಾತನಾಡುವವರೂ ಮಾತಿಗೆ ಮಿತಿಯಿಲ್ಲದವರೂ ಇಂತಹ ದುಃಖವನ್ನೇ ಪಡೆಯುವರು" ಎಂದು ಈ ಗಾಹೆಗಳನ್ನು ಹೇಳಿದನು:

"ಆಮೆ ದನಿಯೆತ್ತಿ ತನ್ನನ್ನು ಕೊಂದಿತು. ಕೋಲನ್ನು ಬಿಗಿ ಹಿಡಿದಿದ್ದು ಕೂಡ, ಮಾತನಾಡಿ ತನ್ನನ್ನು ಕೊಂದಿತು. ಇದನ್ನು ಕಂಡು, ನರವೀರಶ್ರೇಷ್ಠ, ಕುಶಲಿಯಾಗು. ವೇಳೆಯರಿತು ಮಾತನಾಡು. ಬಹು ಮಾತಿನಿಂದ ಆಮೆ ಸತ್ತುದನ್ನು ಕಾಣುವೆಯಲ್ಲವೆ?"

ರಾಜನು "ನನ್ನನ್ನು ಕುರಿತು ಹೇಳುವನು" ಎಂದು ತಿಳಿದು, "ನನ್ನನ್ನು ಕುರಿತು ಹೇಳಿದೆಯು, ಪಂಡಿತ?" ಎಂದನು. ಬೋಧಿಸತ್ವನು "ಮಹಾರಾಜ, ನೀನಾಗಲಿ ಬೇರೆ ಯಾರಾಗಲಿ, ಮಿತಿಯನ್ನು ಮೀರಿ ಮಾತನಾಡಿದರೆ ಇಂತಹ ದುಃಖ ಪ್ರಾಪ್ತವಾಗುವುದು" ಎಂದು ಪ್ರಕಟಪಡಿಸಿ ನುಡಿದನು. ಅಂದಿನಿಂದ ರಾಜನು ತಡೆದು, ಮಾತು ಕಡಮೆ ಮಾಡಿಕೊಂಡನು.

## ಗರ್ಹಿತ ಜಾತಕ (೨೧೯)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಹಿಮವಂತಪ್ರದೇಶದಲ್ಲಿ ವಾನರನಾಗಿ ಹುಟ್ಟಿದನು. ವನಚರನೊಬ್ಬನು ಅವನನ್ನು ಹಿಡಿದೊಯ್ದು ರಾಜನಿಗೆ ಕೊಟ್ಟನು. ಬೋಧಿಸತ್ವನು ಬಹುಕಾಲ ರಾಜಗೃಹದಲ್ಲಿ ವಾಸಮಾಡಿ, ಮಾಡತಕ್ಕ ಕೆಲಸಗಳನ್ನೆಲ್ಲ ಮಾಡಿದನು; ಮನುಷ್ಯಲೋಕದಲ್ಲಿ ನಡೆಯುವ ಕಾರ್ಯಗಳನ್ನು ಬೇಕಾದಹಾಗೆ ತಿಳಿದುಕೊಂಡನು. ರಾಜನು ಅವನ ನಡತೆಗೆ ಪ್ರಸನ್ನನಾಗಿ, ವನಚರನನ್ನು ಕರೆಕಳಿಸಿ, "ಈ ವಾನರನನ್ನು ಹಿಡಿದ ಸ್ಥಳದಲ್ಲಿಯೇ ಬಿಟ್ಟುಬಿಡು" ಎಂದು ಆಜ್ಞೆಮಾಡಿದನು. ಅವನು ಹಾಗೆಯೆ ಮಾಡಿದನು.

ಬೋಧಿಸತ್ವನು ಬಂದುದನ್ನು ವಾನರಗಣವು ತಿಳಿದು, ಅವನನ್ನು ಕಾಣಲೋಸುಗ ದೊಡ್ಡಕಲ್ಲಿನ ಮೇಲೆ ಗುಂಪು ಕೂಡಿ, ಆಡಬೇಕಾದ

ಕುಶಲಪ್ರಶ್ನೆಗಳಾದ ಮೇಲೆ "ಅಯ್ಯಾ, ಇಷ್ಟು ಕಾಲ ಎಲ್ಲಿದ್ದೆ ?" ಎಂದವು.

"ವಾರಣಾಸಿಯಲ್ಲಿ, ರಾಜನ ಮನೆಯಲ್ಲಿ."

"ನಿನಗೆ ಹೇಗೆ ಬಿಡುಗಡೆಯಾಯಿತು ?"

"ರಾಜನು ನನ್ನನ್ನು ಆಟದಕೋತಿ ಮಾಡಿಕೊಂಡು, ನನ್ನ ನಡತೆಗೆ ಪ್ರಸನ್ನನಾಗಿ ನನ್ನನ್ನು ಬಿಡಿಸಿದನು."

ಆಗ ಆ ವಾನರಗಳು "ಮನುಷ್ಯಲೋಕದಲ್ಲಿ ನಡೆಯುವ ಕಾರ್ಯಗಳನ್ನು ನೀನು ಬಲ್ಲೆ. ನಮಗೂ ಅದನ್ನು ಹೇಳು. ನಾವು ಕೇಳಬಯಸುವೆವು" ಎಂದು ಅವನನ್ನು ಕೇಳಿದವು.

"ಜನರ ಕೆಲಸಗಳನ್ನು ಕುರಿತು ನನ್ನನ್ನು ಕೇಳಬೇಡಿ."

"ಹೇಳು. ನಮಗೆ ಕೇಳಲು ಆಸೆ."

ಬೋಧಿಸತ್ವನು "ಮನುಷ್ಯರೆಂಬವರು—ಕ್ಷತ್ರಿಯರಾಗಲಿ ಬ್ರಾಹ್ಮಣರಾಗಲಿ—'ನನ್ನದು! ನನ್ನದು!' ಎನ್ನುವರು. ಅನಿತ್ಯವೆಂಬುದನ್ನು ಕಾಣರು. ಆ ಕುರುಡು ಅಜ್ಞಾನಿಗಳನ್ನು ಕುರಿತು ಕೇಳಿರಿ" ಎಂದು ಹೇಳಿ ಈ ಗಾಥೆಗಳನ್ನು ಹೇಳಿದನು :

"ಬುದ್ಧಿ ಕೆಟ್ಟ ಮನುಷ್ಯರು ಆರ್ಯಧರ್ಮವನ್ನು ಕಾಣದೆ, 'ಈ ಹಿರಣ್ಯ ನನ್ನದು! ಈ ಸುವರ್ಣ ನನ್ನದು!' ಎಂದು ಹಗಲೂ ರಾತ್ರಿ ಕೂಗುವರು."

"ಮನೆಯಲ್ಲಿ ಇಬ್ಬರು ಗೃಹಪತಿಗಳು. ಅವರಲ್ಲಿ ಒಬ್ಬನಿಗೆ ಗಡ್ಡವಿಲ್ಲ. ಆದರೆ ಉದ್ದವಾದ ಮೊಲೆ, ಹೆಣೆದ ತಲೆಗೂದಲು, ತೂತು ಕೊರೆದ ಕಿವಿ. ಅವನನ್ನು ಬಹುಧನ ಕೊಟ್ಟು ಕೊಳ್ಳುವರು. ಅವನು ಅಲ್ಲಿಯ ಜನರನ್ನು ಗೋಳುಗುಟ್ಟಿಸುವನು."

ಆ ಮಾತನ್ನು ಕೇಳಿ, ವಾನರಗಳೆಲ್ಲವೂ "ಹೇಳಬೇಡ, ಹೇಳಬೇಡ. ಕೇಳಲು ಯೋಗ್ಯವಲ್ಲದುದನ್ನು ಕೇಳಿದೆವು" ಎಂದು ಎರಡೂ ಕೈಗಳಿಂದ ಕಿವಿಗಳನ್ನು ಬಿಗಿಯಾಗಿ ಮುಚ್ಚಿ, "ಇಂತಹ ಸ್ಥಳದಲ್ಲಿ ನಾವು ಅಯೋಗ್ಯವಾದುದನ್ನು ಕೇಳಿದೆವು" ಎಂದು ಆ ಸ್ಥಳವನ್ನು ದೂಷಿಸುತ್ತ ಬೇರೆಕಡೆಗೆ

ಹೋದವು. ಆ ಕಲ್ಲಿನ ತುದಿಗೆ 'ಗರ್ಹಿತಪೃಷ್ಟಪಾಷಾಣ'ವೆಂದು ಹೆಸರಾಯಿತು.

## ಹರಿತಮಾತ ಜಾತಕ (೨೩೯)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ನೀಲಿ ಕಪ್ಪೆಯಾಗಿ ಹುಟ್ಟಿದನು. ಆ ಕಾಲದಲ್ಲಿ ಮನುಷ್ಯರು ನದಿಯ ಹಳ್ಳ ತೂತುಗಳಲ್ಲಿ ಮೀನು ಹಿಡಿಯುವುದಕ್ಕೋಸ್ಕರ ಅಲ್ಲಲ್ಲಿ ಮೀನು ಬಲೆಗಳನ್ನು ಒಡ್ಡಿದ್ದರು. ಒಂದು ಮೀನುಬಲೆಯನ್ನು ಬಹು ಮೀನುಗಳು ಹೊಕ್ಕವು. ಆ ಮೀನುಗಳನ್ನು ತಿನ್ನಲು ಒಂದು ನೀರುಹಾವು ತಾನೂ ಆ ಮೀನುಬಲೆಯನ್ನು ಹೊಕ್ಕಿತು. ಮೀನುಗಳು ಒಂದಾಗಿ ಅದನ್ನು ಕಚ್ಚಿ ಅದನ್ನು ರಕ್ತಮಯವನ್ನಾಗಿ ಮಾಡಿದವು. ಅದು ತನ್ನನ್ನು ಕಾಪಾಡಿಕೊಳ್ಳಲು ಬೇರೆ ದಾರಿ ಕಾಣದೆ ಮರಣಭಯದಿಂದ ನಡುಗುತ್ತ ಬಲೆಯ ಬಾಯಿಂದ ಹೊರಬಿದ್ದು, ನೋವುಪಡುತ್ತ, ನೀರಿನ ಅಂಚಿನಲ್ಲಿ ಬಿದ್ದಿತು. ನೀಲಿ ಕಪ್ಪೆ ಕೂಡ ಅದೇ ಕ್ಷಣ ಮೇಲೆ ಹಾರಿ ಬಲೆಯ ಬಾಯ ಮೇಲೆ ಕುಳಿತಿತು.

ಹಾವು ಬೇರೆ ಎಲ್ಲಿಯೂ ನ್ಯಾಯ ದೊರಕದೆ, ಅಲ್ಲಿ ಕುಳಿತ ಕಪ್ಪೆಯನ್ನು ಕುರಿತು "ಅಯ್ಯಾ ನೀಲಿಕಪ್ಪೆ, ಈ ಮೀನುಗಳು ಮಾಡಿದ ಕೆಲಸ ನಿನಗೆ ಒಪ್ಪಿಗೆಯೆ?" ಎಂದು ಕೇಳುತ್ತ ಮೊದಲ ಗಾಹೆ ಹೇಳಿತು:

"ಅಯ್ಯಾ ಹಸುರುತಾಯಿಯ ಮಗನೆ, ನಾನು ಹಾವಾಗಿದ್ದರೂ ಕೂಡ ಬಲೆಯ ಬಾಯನ್ನು ಪ್ರವೇಶಿಸಿದಾಗ ಮೀನುಗಳು ನನ್ನನ್ನು ಕಚ್ಚಿವೆ. ಇದನ್ನು ನೀನು ಒಪ್ಪುವೆಯ?"

ಆಗ ಆ ಹಸುರು ಕಪ್ಪೆ "ನಾನು ಒಪ್ಪುತ್ತೇನಯ್ಯ. ಏಕೆ? ನಿನ್ನ ಸ್ಥಳಕ್ಕೆ ಬಂದ ಮೀನುಗಳನ್ನು ನೀನು ತಿಂದರೆ, ತಮ್ಮ ಸ್ಥಳಕ್ಕೆ ಬಂದ ನಿನ್ನನ್ನು ಮೀನುಗಳೂ ತಿನ್ನುವುವು. ತಮ್ಮ ತಮ್ಮ ಸ್ಥಳಗಳಲ್ಲಿ, ಪ್ರದೇಶ

ಗಳಲ್ಲಿ, ಆಹಾರ ಭೂಮಿಗಳಲ್ಲಿ ಯಾರೂ ಬಲಹೀನರಲ್ಲ" ಎಂದು ಹೇಳಿ ಎರಡನೆಯ ಗಾಹೆ ಹೇಳಿತು:

"ಲಾಭವಾಗುವ ವರೆಗೆ ಮನುಷ್ಯನು ಲೂಟಿ ಮಾಡಿಯೇ ಮಾಡುವನು. ಇನ್ನೊಬ್ಬನು ಲೂಟಿ ಮಾಡಿದಾಗ ಮೊದಲು ಲೂಟಿ ಮಾಡುತ್ತಿದ್ದವನಿಗೆ ಲೂಟಿಯಾಗುವುದು"

ಹೀಗೆಂದು ಬೋಧಿಸತ್ವನು ತೀರ್ಪುಕೊಡಲು, ನೀರು ಹಾವು ಬಲಹೀನವಾಗಿರುವುದನ್ನು ತಿಳಿದು, ಶತ್ರುವನ್ನು ಹಿಡಿಯೋಣವೆಂದು ಮೀನುಗಳು ಬಲೆಯ ಬಾಯಿಂದ ಹೊರಬಿದ್ದು, ಅದನ್ನು ಅಲ್ಲಿಯೇ ಸಾಯಿಸಿ, ಹೊರಟುಹೋದುವು.

## ಮಹಾಪಿಂಗಲ ಜಾತಕ (೨೪೦)

ಹಿಂದೆ, ವಾರಣಾಸಿಯಲ್ಲಿ ಮಹಾಪಿಂಗಲನೆಂಬ ರಾಜನು ಅಧರ್ಮದಿಂದ ವಿಷಮವಾಗಿ ರಾಜ್ಯವಾಳುತ್ತಿದ್ದನು. ತನ್ನ ಇಚ್ಛೆಗೆ ವಶನಾಗಿ ಪಾಪಕರ್ಮಗಳನ್ನು ಮಾಡುತ್ತ, ಜನರಿಗೆ ದಂಡ ತೆರಿಗೆಗಳನ್ನು ಹಾಕುತ್ತ, ಅವರ ಅಂಗಾಂಗಗಳನ್ನು ಕಡಿಸುತ್ತ, ಅವರ ಹಣವನ್ನು ಸುಲಿದುಕೊಳ್ಳುತ್ತ ಕಬ್ಬಿನಯಂತ್ರದಲ್ಲಿ ಕಬ್ಬನ್ನು ಹೇಗೋ ಹಾಗೆ ಜನರನ್ನು ಪೀಡಿಸುತ್ತಿದ್ದನು. ಅವನು ಕ್ರೂರಿಯಾಗಿ ಪರುಷನಾಗಿ ಸಾಹಸಿಕನಾಗಿದ್ದನು. ಇತರರಲ್ಲಿ ಕೊಂಚವೂ ಅನುದಯೆ ಅವನಿಗಿರಲಿಲ್ಲ. ಮನೆಯಲ್ಲಿ ಹೆಂಗಸರು, ಗಂಡುಮಕ್ಕಳು, ಹೆಣ್ಣುಮಕ್ಕಳು, ಅಮಾತ್ಯರು, ಬ್ರಾಹ್ಮಣರು, ಗೃಹಪತಿಗಳು ಮೊದಲಾಗಿ ಎಲ್ಲರಿಗೂ ಅಪ್ರಿಯನಾಗಿದ್ದನು. ಯಾರಿಗೂ ಅವನನ್ನು ಕಂಡರಾಗುತ್ತಿರಲಿಲ್ಲ. ಅವನು ಕಣ್ಣಿಗೆ ಬಿದ್ದ ಕಸದಂತೆ, ಅನ್ನದ ಮುದ್ದೆಯಲ್ಲಿನ ಕಲ್ಲಿನಂತೆ, ಹೆಜ್ಜೆಯನ್ನು ಸೀಳಿ ಹೊಕ್ಕ ಮುಳ್ಳಿನಂತೆ ಇದ್ದನು.

ಆ ಕಾಲದಲ್ಲಿ ಬೋಧಿಸತ್ವನು ಮಹಾಪಿಂಗಲನ ಮಗನಾಗಿ ಹುಟ್ಟಿದನು. ಮಹಾಪಿಂಗಲನು ಬಹುಕಾಲ ರಾಜ್ಯವಾಳಿ ಕಾಲವಾದನು.

ಅವನು ಕಾಲವಾಗಲು ವಾರಣಾಸಿಯ ಜನಗಳೆಲ್ಲರೂ ಹರ್ಷಿಸಿ ತೃಪ್ತಿಯಿಂದ ಮಹಾಹಾಸವನ್ನು ಬೀರುತ್ತ, ಸಾವಿರ ಗಾಡಿ ಕಟ್ಟಿಗೆಯಿಂದ ಮಹಾಪಿಂಗಲನನ್ನು ಉರಿಸಿ, ಅನೇಕ ಸಾವಿರ ಗಡಿಗೆಗಳಿಂದ ಸುಡುಗಾಡನ್ನು ಆರಿಸಿ, ಬೋಧಿಸತ್ವನಿಗೆ ರಾಜ್ಯಾಭಿಷೇಕಮಾಡಿ, 'ಧಾರ್ಮಿಕನಾದ ರಾಜನು ನಮಗೆ ದೊರಕಿದನು' ಎಂದು ಹರ್ಷಗೊಂಡು, ತೃಪ್ತಿಹೊಂದಿ, ನಗರದಲ್ಲಿ ಉತ್ಸಾಹಭೇರಿಯನ್ನು ತಿರುಗಿಸಿ, ಎತ್ತಿದ ಧ್ವಜಪತಾಕೆಗಳಿಂದ ಆ ನಗರವನ್ನು ಅಲಂಕರಿಸಿ, ಬಾಗಿಲು ಬಾಗಿಲಿಗೂ ಮಂಟಪ ಮಾಡಿಸಿ, ಅಲಂಕರಿಸಿದ ಮಂಟಪದಲ್ಲಿ ಕೂರುವ ಕಡೆ ಅರಳು ಹೂಗಳನ್ನು ಹರಡಿ ಕುಳಿತು, ತಿಂದರು, ಕುಡಿದರು. ಬೋಧಿಸತ್ವನು ಕೂಡ ಅಲಂಕೃತವಾದ ಮಹಾಸ್ಥಲದಲ್ಲಿ ಎತ್ತಿದ ಬೆಳ್ಗೊಡೆ ಪರ್ಯಂಕಗಳ ನಡುವೆ ಮಹಾಯಶಸ್ಸನ್ನು ಅನುಭವಿಸುತ್ತ ಕುಳಿತನು. ಅಮಾತ್ಯರು ಬ್ರಾಹ್ಮಣ ಗೃಹಪತಿಗಳು, ರಾಷ್ಟ್ರಿಕರು, ದ್ವಾರಪಾಲಕರು ಮೊದಲಾದವರು ರಾಜನ ಸುತ್ತ ಬಳಸಿ ನಿಂತಿದ್ದರು.

ಆಗ ಒಬ್ಬ ದ್ವಾರಪಾಲಕನು ಕೊಂಚ ದೂರದಲ್ಲಿ ನಿಂತು ಉಸಿರು ಬಿಡುತ್ತ ಎಳೆಯುತ್ತ ಅಳುತ್ತಿದ್ದನು. ಬೋಧಿಸತ್ವನು ಅವನನ್ನು ಕಂಡು, "ಆಯ್ಯಾ ದ್ವಾರಪಾಲಕ, ನನ್ನ ತಂದೆ ಸಾಯಲು ಸರ್ವರೂ ತೃಪ್ತಿಗೊಂಡು ಹರ್ಷಿಸುತ್ತ ಉತ್ಸವಮಾಡುತ್ತಿರುವರು. ನೀನು ಮಾತ್ರ ಬಹುವಾಗಿ ಅಳುತ್ತ ನಿಂತಿರುವೆ? ಏನು, ನಿನಗೆ ಮಾತ್ರ ಪ್ರಿಯನಾಗಿ ಮನಸ್ಸಿಗೆ ಹಿತವಾಗಿದ್ದನೇನು?" ಎಂದು ಕೇಳುತ್ತ,

"ಪಿಂಗಲನು ಸರ್ವ ಜನರನ್ನೂ ಹಿಂಸಿಸುತ್ತಿದ್ದನು. ಅವನು ಸಾಯಲು ಎಲ್ಲರೂ ಪ್ರೀತರಾದರು. ಆ ಹಳದಿಕಣ್ಣಿನವನು ನಿನಗೆ ಪ್ರಿಯನಾಗಿದ್ದನೇನು?
ನೀನೇಕೆ ಅಳುವೆ, ದ್ವಾರಪಾಲ?"

ಎಂದು ಮೊದಲ ಗಾಹೆ ಹೇಳಿದನು.

ಅವನು ಆತನ ಮಾತು ಕೇಳಿ, "ಪಿಂಗಲನು ಸತ್ತನೆಂದು ನಾನು ಶೋಕದಿಂದ ಅಳುತ್ತಿಲ್ಲ. ಅವನು ಹೋದುದು ನನ್ನ ತಲೆಗೆ ಸುಖವಾಯಿತು. ಪಿಂಗಲರಾಜನು ಮಾಳಿಗೆ ಇಳಿಯುವಾಗಲೂ ಏರುವಾಗಲೂ



ಕಚ್ಛಪ ಜಾತಕ (೨೧೫) (ಕೆಳಗಡೆ ಎರಡನೆಯದು) [ಪುಟ ೨೨

(Copyright: Director, Archæological Service in Netherlands, India)
(Courtesy: Dr. A. Venkatasubbiah, M.A., Ph.D., LL.B.)



**ಕಚ್ಛಪ ಜಾತಕ (೨೧೫)** [ಪುಟ ೨೨

(ಶಿವಮೊಗ್ಗಾ ಡಿಸ್ಟ್ರಿಕ್ಟಿನ ಬಳ್ಳಿಗಾವೆ ಗ್ರಾಮದಿಂದ)

(Photo:-Sri P. Srinivasa Rao, M.sc.)

ಕಮ್ಮಾರನು ಮುಷ್ಟಿಯಿಂದ ಹೊಡೆದಂತೆ ನನ್ನ ತಲೆಯ ಮೇಲೆ ಎಂಟೆಂಟು ಕುಟ್ಟುತ್ತಿದ್ದನು. ಅವನು ಪರಲೋಕಕ್ಕೆ ಹೋದರೂ, ನನ್ನ ತಲೆಗೆ ಕೊಡುತ್ತಿದ್ದಂತೆ ನರಕಪಾಲಕನಾದ ಯಮನ ತಲೆಯ ಮೇಲೂ ಕುಟ್ಟುವನು. ಆಗ ಅವನು 'ಇವನು ನಮ್ಮನ್ನು ಅತಿಯಾಗಿ ಬಾಧಿಸುವನು' ಎಂದು ಅವನನ್ನು ಪುನಃ ಇಲ್ಲಿಗೇ ಕರೆತಂದು ಬಿಡುವನು. ಆಗ ಅವನು ಮತ್ತೆ ನನ್ನ ತಲೆಯ ಮೇಲೆ ಕುಟ್ಟುವನು—ಎಂದು ಭಯದಿಂದ ನಾನು ಅಳುತ್ತೇನೆ" ಎಂದು ಆ ಅರ್ಥವನ್ನು ಬೆಳಗಿಸಲು ಎರಡನೆಯ ಗಾಹೆ ಹೇಳಿದನು :

"ಹಳದಿಯ ಕಣ್ಣಿನವನು ನನಗೆ ಪ್ರಿಯನಾಗಿರಲಿಲ್ಲ, ಅವನು ಹಿಂದಿರುಗುವನೆಂದು ನಾನು ಹೆದರುವೆನು. ಇಲ್ಲಿಂದ ಹೋಗಿ ಮೃತ್ಯುರಾಜನನ್ನು ಹಿಂಸಿಸುವನು. ಅವನು ಹಿಂಸೆಗೊಂಡು ಪುನಃ ಅವನನ್ನು ಇಲ್ಲಿಗೆ ತಂದುಬಿಡುವನು."

ಆಗ ಬೋಧಿಸತ್ವನು ಅವನನ್ನು ಕುರಿತು "ಆ ರಾಜನನ್ನು ಸಾವಿರ ಗಾಡಿ ಕಟ್ಟಿಗೆಯಿಂದ ಸುಟ್ಟಿದೆ, ಸಾವಿರ ಗಡಿಗೆ ನೀರಿನಿಂದ ಆರಿಸಿದೆ. ಅವನ ಸುಡುಗಾಡನ್ನು ಸುತ್ತಲೂ ಅಗೆದಾಗಿದೆ. ಸಹಜವಾಗಿ, ಪರಲೋಕಕ್ಕೆ ಹೋದವರು ಬೇರೆ ಗತಿಗೆ ವಶರಾಗಿ ಪುನಃ ಅದೇ ಶರೀರದಿಂದ ಬರುವುದಿಲ್ಲ. ಹೆದರಬೇಡ" ಎಂದು ಅವನನ್ನು ಸಂತೈಸಿ, ಈ ಗಾಹೆ ಹೇಳಿದನು :

"ಸಾವಿರ ಗಾಡಿಯಿಂದ ಸುಟ್ಟಾಯಿತು. ನೂರು ಗಡಿಗೆಗಳಿಂದ ನೆನೆಸಿಯಾಯಿತು. ಆ ನೆಲವನ್ನು ಸುತ್ತ ಅಗೆದುದಾಯಿತು. ಹೆದರಬೇಡ, ಅವನು ಹಿಂದಿರುಗಿಬರುವುದಿಲ್ಲ."

ಅಂದಿನಿಂದ ದ್ವಾರಪಾಲಕನು ಸಂತೈಸಲ್ಪಟ್ಟನು. ಬೋಧಿಸತ್ವನು ಧರ್ಮದಿಂದ ರಾಜ್ಯವಾಳುತ್ತ ದಾನಾದಿ ಪುಣ್ಯಗಳನ್ನು ಮಾಡಿ ಕರ್ಮಕ್ಕೆ ಅನುಸಾರವಾಗಿ ಹೋದನು.

## ದೂತ ಜಾತಕ (೨೬೦)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಅವನ ಮಗನಾಗಿ, ವಯಸ್ಸು ಬಂದಮೇಲೆ ತಕ್ಷಶಿಲೆಯಲ್ಲಿ ವಿದ್ಯೆ ಕಲಿತು, ತಂದೆ ಸತ್ತನಂತರ ರಾಜ್ಯದಲ್ಲಿ ನೆಲಸಿ, ಚೊಕ್ಕ ಭೋಜನ ಮಾಡುತ್ತಿದ್ದನು. ಅದರಿಂದ ಅವನಿಗೆ ಭೋಜನಶುದ್ಧಿಕ ರಾಜನೆಂದೇ ಹೆಸರಾಯಿತು. ಅವನು ಎಂತಹ ವಿಧಾನದಿಂದ ಊಟ ಮಾಡುತ್ತಿದ್ದನೆಂದರೆ—ಒಂದು ಊಟದ ತಟ್ಟೆಗಾಗಿ ನೂರುಸಾವಿರ ವ್ಯಯಮಾಡುವನು. ಊಟಮಾಡಿದರೂ ಮನೆಯೊಳಗೆ ಉಣ್ಣನು. ತನ್ನ ಭೋಜನ ವಿಧಾನವನ್ನು ನೋಡುವ ಪುಣ್ಯ ಮಹಾಜನರಿಗೆ ಆಗಲೆಂಬ ಬಯಕೆಯಿಂದ ರಾಜದ್ವಾರದಲ್ಲಿ ರತ್ನಮಂಟಪವನ್ನು ಹಾಕಿಸಿ, ಊಟದ ವೇಳೆಯಲ್ಲಿ ಅದಕ್ಕೆ ಅಲಂಕಾರಮಾಡಿಸಿ, ಚಿನ್ನದಿಂದ ಮಾಡಿದ ಬೆಳ್ಗೊಡೆಯನ್ನು ಎತ್ತಿಸಿ, ರಾಜಪರ್ಯಂಕದಲ್ಲ ಕುಳಿತು, ಕ್ಷತ್ರಿಯ-ಕನ್ಯೆಯರು ಸುತ್ತ ಬಳಸಿರಲು, ನೂರುಸಾವಿರ ಬೆಲೆಬಾಳುವ ಚಿನ್ನದ ತಟ್ಟೆಗಳಲ್ಲಿ ನೂರು ರಸಗಳ ಊಟವನ್ನು ಅನುಭವಿಸುವನು.

ಆಗ ಒಬ್ಬ ಆಸೆಯುಳ್ಳ ಮನುಷ್ಯನು ಆ ಭೋಜನ ವಿಧಾನವನ್ನು ಕಂಡು, ಆ ಊಟವನ್ನು ಉಣಬಯಸಿ, ಹಸಿವನ್ನು ತಡೆಯಲಾರದೆ, 'ಇದು ಉಪಾಯ'ವೆಂದು ಬಿಗಿಯಾಗಿ ಬಟ್ಟೆಹಾಕಿಕೊಂಡು ಕೈಗಳನ್ನು ಮೇಲೆತ್ತಿ "ಭೋ, ನಾನು ದೂತ, ದೂತ" ಎಂದು ದನಿಯೆತ್ತಿ ಕೂಗುತ್ತ ರಾಜನಬಳಿ ಸಾರಿದನು. ಆ ಸಮಯದಲ್ಲಿ ಆ ಜನಪದದಲ್ಲಿ 'ದೂತ ನಾನು' ಎಂದವನನ್ನು ತಡೆಯುತ್ತಿರಲಿಲ್ಲ ಆದ್ದರಿಂದ ಮಹಾಜನರು ಎರಡಾಗಿ ಒಡೆದು ಅವನಿಗೆ ದಾರಿಕೊಟ್ಟರು. ಅವನು ವೇಗದಿಂದ ಹೋಗಿ ರಾಜನ ತಟ್ಟೆಯಿಂದ ಒಂದು ಅನ್ನದ ಮುದ್ದೆಯನ್ನು ಹಿಡಿದು ಬಾಯಿಗೆ ಹಾಕಿಕೊಂಡನು. ಆಗ, ಕತ್ತಿಹಿಡಿದವನು ಇವನ ತಲೆ ಕತ್ತರಿಸುವೆನೆಂದು ಕತ್ತಿಯನ್ನು ಹೊರಗೆಳೆದನು. ರಾಜನು ಹೊಡೆಯಬೇಡವೆಂದು ತಡೆದನು; 'ಹೆದರಬೇಡ, ತಿನ್ನು' ಎಂದನು. ತಾನು ಕೈ ತೊಳೆದುಕೊಂಡು ಕುಳಿತನು.

ಊಟವಾದನಂತರ ಅವನಿಗೆ ತಾನು ಕುಡಿಯುವುದನ್ನೂ ತನ್ನ ತಂಬುಲವನ್ನೂ ಕೊಡಿಸಿ, "ಭೋ ಪುರುಷ, ನೀನು ದೂತನೆಂದು ಹೇಳಿದೆ. ಯಾರ ದೂತ ನೀನು?" ಎಂದು ಕೇಳಿದನು.

"ಮಹಾರಾಜ, ನಾನು ಆಸೆಯ ದೂತ, ಹೊಟ್ಟೆಯ ದೂತ. ಆಸೆಯು ನನಗೆ ಆಜ್ಞೆಮಾಡಿ 'ನೀನು ಹೋಗು' ಎಂದು ದೂತನನ್ನಾಗಿ ಕಳಿಸಿತು" ಎಂದು ಹೇಳಿ ಮೊದಲನೆ ಎರಡು ಗಾಹೆ ಹೇಳಿದನು :

"ಯಾವುದಕ್ಕಾಗಿ ದೂರವಾದರೂ ಹೋಗುವರೋ, ಶತ್ರುವನ್ನಾದರೂ ಬೇಡುವರೋ ಅಂತಹ ಹೊಟ್ಟೆಯ ದೂತ ನಾನು. ನನ್ನ ಮೇಲೆ ಕೋಪ ಬೇಡ, ರಾಜ.

"ಮಾನವರು ಯಾವುದಕ್ಕೆ ವಶರಾಗಿ ಹಗಲೂ ರಾತ್ರಿಯೂ ಹೋಗುವರೋ ಅಂತಹ ಹೊಟ್ಟೆಯ ದೂತ ನಾನು. ನನ್ನ ಮೇಲೆ ಕೋಪ ಬೇಡ, ರಾಜ"

ರಾಜನು ಅವನ ಮಾತು ಕೇಳಿ, "ಇದು ಸತ್ಯ. ಜೀವಿಗಳು ಹೊಟ್ಟೆಯ ದೂತರು, ಆಸೆಗೆ ವಶರಾಗಿ ತಿರುಗುವವರು. ಆಸೆ ತಾನೂ ಈ ಜೀವಿಗಳನ್ನು ತಿರುಗಿಸುವುದು. ಇವನು ಹೇಳಿದುದು ಮನಸ್ಸಿಗೆ ಎಷ್ಟು ಚೆನ್ನಾಗಿದೆ!" ಎಂದು ತೃಪ್ತನಾಗಿ,

"ಬ್ರಾಹ್ಮಣ, ಗೂಳಿಗಳೊಡಗೂಡಿದ ಸಾವಿರ ಕೆಂಪು ಹಸುಗಳನ್ನು ಕೊಡುವೆನು. ದೂತನು ದೂತನಿಗೇಕೆ ಕೊಡಬಾರದು! ನಾನು ಕೂಡ ನಿನ್ನಂತೆಯೇ ದೂತ!"

ಎಂದು ಮೂರನೆಯ ಗಾಹೆಯನ್ನು ಹೇಳಿ, "ಹಿಂದೆ ಕೇಳದುದನ್ನು, ಚಿಂತಿಸದುದನ್ನು, ಈ ಮಹಾಪುರುಷನು ಹೇಳಿದುದನ್ನು ಕೇಳಿದೆನು" ಎಂದು ಸಂತುಷ್ಟಚಿತ್ತನಾಗಿ ಅವನಿಗೆ ಮಹಾಯಶಸ್ಸನ್ನು ಕೊಟ್ಟನು.

## ಆರಾಮದೂಷ ಜಾತಕ (೨೬೮)

ಹಿಂದೆ, ವಾರಣಾಸಿಯಲ್ಲಿ ವಿಶ್ವಸೇನನೆಂಬುವನು ರಾಜ್ಯವಾಳುತ್ತಿದ್ದನು. ಅವನು, ಒಂದು ಸಲ, ನಗರದಲ್ಲಿ ಉತ್ಸವವಾಗುವುದೆಂದು ಕೂಗಿ

ಸಿದನು. ಅಲ್ಲಿಯ ತೋಟದ ಕಾವಲುಗಾರನು ತಾನೂ ಉತ್ಸವದಲ್ಲಿ ಆಡಬೇಕೆಂದು ಆ ತೋಟದಲ್ಲಿ ವಾಸಿಸುತ್ತಿದ್ದ ಕೋತಿಗಳನ್ನು ಕರೆದು " ಈ ತೋಟದಿಂದ ನಿಮಗೆ ಬಹಳ ಉಪಕಾರವಾಗಿದೆ. ನಾನು ಏಳು ದಿವಸ ಉತ್ಸವಕ್ಕೆ ಹೋಗುತ್ತೇನೆ. ನೀವು ಏಳು ದಿವಸ ಸಸಿಗಳಿಗೆ ನೀರೆರೆಯುವಿರ? " ಎಂದು ಕೇಳಿದನು. ಅವು ಆಗಲೆಂದು ಒಪ್ಪಿದವು. ಅವನು ಅವುಗಳಿಗೆ ಚರ್ಮದ ಕೊಡಗಳನ್ನು ಕೊಟ್ಟು ಹೊರಟನು. ಕೋತಿಗಳು ನೀರೆಳೆದು ಸಸಿಗಳಿಗೆ ಎರೆದವು.

ಆಗ ಆ ಕೋತಿಗಳಲ್ಲಿ ಹಿರಿಯನಾದುದು " ನಡೆಯಿರಿ ! ನೀರು ಸದಾ ದೊರಕುವುದಿಲ್ಲ ; ಅದನ್ನು ಕಾಪಾಡಬೇಕು. ಸಸಿಗಳನ್ನು ಕಿತ್ತೆತ್ತಿ ಬುಡದ ಅಳತೆಯನ್ನು ತಿಳಿದು, ದೊಡ್ಡ ಬುಡಕ್ಕೆ ಹೆಚ್ಚು ನೀರನ್ನೂ ಸಣ್ಣ ಬುಡಕ್ಕೆ ಸ್ವಲ್ಪ ನೀರನ್ನೂ ಎರೆಯೋಣ " ಎಂದಿತು. ಆ ಕೋತಿಗಳು ಹಾಗೆಯೇ ಆಗಲೆಂದು ಒಪ್ಪಿದುವು. ಕೆಲವು ಕೋತಿಗಳು ಸಸಿಗಳನ್ನು ಕಿತ್ತು ಎತ್ತುವುವು ; ಇನ್ನು ಕೆಲವು ಅವನ್ನು ಪುನಃ ನಟ್ಟು ನೀರೆರೆಯುವುವು.

ಆ ಕಾಲದಲ್ಲಿ ಬೋಧಿಸತ್ವನು ವಾರಣಾಸಿಯ ಒಂದು ಮನೆಯಲ್ಲಿ ಮಗನಾಗಿ ಹುಟ್ಟಿದನು. ಅವನು ಯಾವುದೋ ಕಾರ್ಯಕ್ಕಾಗಿ ಆ ಉದ್ಯಾನಕ್ಕೆ ಹೋಗಿ, ಕೋತಿಗಳು ಮಾಡುವ ಕೆಲಸ ಕಂಡು " ನಿಮ್ಮಿಂದ ಹೀಗೆ ಮಾಡಿಸುವವರು ಯಾರು ? " ಎಂದು ಕೇಳಿದನು. ಕೋತಿಗಳು " ನಮ್ಮ ಗುಂಪಿನ ಹಿರಿಯನು " ಎಂದವು. ಬೋಧಿಸತ್ವನು ಅದನ್ನು ಕೇಳಿ " ನಿಮ್ಮ ಹಿರಿಯನ ಪ್ರಜ್ಞೆಯೇ ಹೀಗಾದರೆ ನಿಮ್ಮದು ಎಂತಹದಾದೀತು ?" ಎಂದು ಆ ಅರ್ಥವನ್ನು ವಿವರಿಸಲು

" ಈ ಎಲ್ಲ ಗುಂಪಿನಲ್ಲಿ ಇದನ್ನೇ ಉತ್ತಮನೆನ್ನುವರು. ಇದರ ಪ್ರಜ್ಞೆಯೇ ಹೀಗಿರುವಾಗ, ಇದರ ಪ್ರಜೆಗಳದು ಹೇಗಿರಬೇಕು ? "
ಎಂದು ಮೊದಲ ಗಾಹೆ ಹೇಳಿದನು.

ಕೋತಿಗಳು ಆ ಮಾತು ಕೇಳಿ

“ಬ್ರಾಹ್ಮಣ, ನೀನು ತಿಳಿಯದೆ ಹೀಗೆಲ್ಲ ನಿಂದಿಸುವೆ! ಬುಡವನ್ನು ನೋಡದೆ ಮರದ ಬೆಳುವಳಿಗೆ ತಿಳಿಯುವುದು ಹೇಗೆ?”
ಎಂದು ಎರಡನೆಯ ಗಾಹೆ ಹೇಳಿದುವು.

ಅದನ್ನು ಕೇಳಿ ಬೋಧಿಸತ್ವನು

“ನಿಮ್ಮನ್ನಾಗಲಿ ವನದ ಬೇರೆ ವಾನರರನ್ನಾಗಲಿ ನಾನು ನಿಂದಿಸುವುದಿಲ್ಲ. ನಿಮ್ಮಂತಹ ವನಪಾಲಕರಿಗಾಗಿ ವಿಶ್ವಸೇನನನ್ನು ನಿಂದಿಸುವೆನು”
ಎಂದು ಮೂರನೆಯ ಗಾಹೆ ಹೇಳಿದನು.

## ಉಲೂಕ ಜಾತಕ (೨೭೦)

ಹಿಂದೆ, ಪ್ರಥಮಕಲ್ಪದ ಜನರು ಒಟ್ಟುಕೂಡಿ ಒಬ್ಬ ಅಭಿರೂಪನೂ ಸೌಭಾಗ್ಯಪ್ರಾಪ್ತನೂ ಆಜ್ಞಾಸಂಪನ್ನನೂ ಸರ್ವಾಕಾರಪರಿಪೂರ್ಣನೂ ಆದ ಪುರುಷನನ್ನು ಹಿಡಿದು ರಾಜನನ್ನಾಗಿ ಮಾಡಿದರು. ಚತುಷ್ಪಾದಗಳು ಕೂಡ ಒಟ್ಟುಸೇರಿ ಒಂದು ಸಿಂಹವನ್ನು ರಾಜನನ್ನಾಗಿ ಮಾಡಿದವು. ಮಹಾ ಸಮುದ್ರದ ಮತ್ಸ್ಯಗಳು ಆನಂದನೆಂಬ ಮತ್ಸ್ಯವನ್ನು ರಾಜನನ್ನಾಗಿ ಮಾಡಿದವು.

ಆಗ, ಹಕ್ಕಿಗಳ ಗುಂಪು ಹಿಮವಂತಪ್ರದೇಶದ ಒಂದು ಕಲ್ಲಿನ ಮೇಲೆ ಒಟ್ಟುಸೇರಿ “ಮನುಷ್ಯರಲ್ಲಿ ರಾಜನಿರುವಂತೆಯೇ ಪ್ರಾಣಿಗಳಲ್ಲೂ ಮೀನುಗಳಲ್ಲೂ ಉಂಟು. ನಮ್ಮಲ್ಲಿ ರಾಜನೆಂಬವನಿಲ್ಲ. ಅರಾಜಕತ್ವವು ನಡೆಯತಕ್ಕದ್ದಲ್ಲ. ನಮಗೂ ರಾಜನು ಬೇಕು. ರಾಜನ ಸ್ಥಾನದಲ್ಲಿ ನಿಲ್ಲಿಸಲು ಯೋಗ್ಯನಾದವನನ್ನು ತಿಳಿಯಿರಿ” ಎಂದುವು. ಅವು ಅಂತಹ ಹಕ್ಕಿಗಾಗಿ ಸುತ್ತನೋಡುತ್ತ ಒಂದು ಗೂಬೆಯನ್ನು ಇಷ್ಟಪಟ್ಟು “ಇದನ್ನು ನಾವು ಒಪ್ಪುತ್ತೇವೆ” ಎಂದವು. ಆಗ ಒಂದು ಹಕ್ಕಿ ಎಲ್ಲರ ಅಭಿಮತ ವನ್ನೂ ಪಡೆಯುವುದಕ್ಕಾಗಿ ಮೂರು ಬಾರಿ ತಿಳಿಸಿತು. ಅದು ತಿಳಿಸು ವಾಗ ಎರಡು ಸಲ ತಿಳಿಸಿದುದನ್ನು ಚೆನ್ನಾಗಿ ಕೇಳಿ, ಮೂರನೆಯ ಬಾರಿ ತಿಳಿಸುವಾಗ ಒಂದು ಕಾಗೆ ಎದ್ದು, “ತಾಳಬೇಕು. ರಾಜ್ಯಾಭಿಷೇಕದ

ಕಾಲದಲ್ಲಿಯೇ ಇದಕ್ಕೆ ಇಂತಹ ಮುಖ! ಇನ್ನು ಕೋಪಗೊಂಡಾಗ ಹೇಗಾದೀತೊ! ಇದು ಕೋಪಗೊಂಡು ನೋಡಿದರೆ, ಕಾದ ಓಡಿನಲ್ಲಿ ಚೆಲ್ಲಿದ ಎಳ್ಳಿನಂತೆ ನಾವು ಅಲ್ಲಲ್ಲೇ ಚದರಿಹೋದೇವು! ಇದನ್ನು ರಾಜ ನಾಗಿ ಮಾಡುವುದು ನನಗೆ ರುಚಿಸುವುದಿಲ್ಲ" ಎಂದು ಆ ಅರ್ಥವನ್ನು ಬೆಳಗಲು ಮೊದಲ ಗಾಹೆ ಹೇಳಿತು :

"ಜ್ಞಾತಿಗಳೆಲ್ಲರಲ್ಲಿ ಈ ಕೌಶಿಕನನ್ನು ಒಡೆಯನನ್ನಾಗಿ ಮಾಡುವಿರಿ. ಜ್ಞಾತಿಗಳು ಅನುಜ್ಞೆ ಕೊಟ್ಟರೆ, ಒಂದು ಮಾತು ಹೇಳುವೆನು."

ಅದಕ್ಕೆ ಅನುಜ್ಞೆ ಕೊಡುತ್ತ ಹಕ್ಕಿಗಳು ಎರಡನೆಯ ಗಾಹೆ ಹೇಳಿದುವು :

"ಕೇವಲ ಅರ್ಥ ಧರ್ಮಗಳುಳ್ಳ ಮಾತನ್ನು ಹೇಳಯ್ಯ, ಅನುಜ್ಞೆ ಯುಂಟು. ಚಿಕ್ಕವಾದರೂ ಪ್ರಜ್ಞೆಯಿರುವ, ಪ್ರಕಾಶಮಾನವಾದ ಪಕ್ಷಿಗಳೂ ಉಂಟು."

ಹೀಗೆ ಅನುಜ್ಞೆ ಹೊಂದಿ, ಅದು ಮೂರನೆಯ ಗಾಹೆ ಹೇಳಿತು :

"ನಿಮಗೆ ಮಂಗಳವಾಗಲಿ. ಗೂಬೆಯ ಅಭಿಷೇಕವು ನನಗೆ ರುಚಿಸುವು ದಿಲ್ಲ. ಕೋಪವಿಲ್ಲದವನ ಮುಖ ನೋಡಿರಿ! ಕೋಪಗೊಂಡಾಗ ಏನು ಮಾಡಿ ಯಾನು!"

ಹೀಗೆಂದು, "ನನಗೆ ರುಚಿಸುವುದಿಲ್ಲ, ನನಗೆ ರುಚಿಸುವುದಿಲ್ಲ" ಎಂದು ಕೂಗುತ್ತ ಅದು ಗಗನದಲ್ಲಿ ಹಾರಿಹೋಯಿತು. ಗೂಬೆಯೂ ಮೇಲೆದ್ದು ಅದರ ಬೆನ್ನಟ್ಟಿತು. ಅಂದಿನಿಂದ ಅವು ಒಂದಕ್ಕೊಂದು ವೈರ ಕಟ್ಟಿಕೊಂಡವು.

ಹಕ್ಕಿಗಳು ಸುವರ್ಣಹಂಸವನ್ನು ರಾಜನಾಗಿ ಮಾಡಿಕೊಂಡು ಹೋದವು.

## ಲೋಲ ಜಾತಕ (೨೭೪)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ವಾರಣಾಸಿಯ ಸೆಟ್ಟಿಯ ಅಡುಗೆಯ ಮನೆಯಲ್ಲಿ ಅಡುಗೆಯವನು ಪುಣ್ಯ

ಕ್ಕಾಗಿ ಒಂದು ಹಕ್ಕಿಯ ಗೂಡನ್ನು ನಿಲ್ಲಿಸಿದನು. ಆ ಕಾಲದಲ್ಲಿ ಬೋಧಿಸತ್ವನು ಪಾರಿವಾಳದ ಹೊಟ್ಟೆಯಲ್ಲಿ ಹುಟ್ಟಿ ಅಲ್ಲಿ ವಾಸಮಾಡಿಕೊಂಡನು.

ಆಗ ಒಂದು ಅತಿ ಆಸೆಯ ಕಾಗೆಯು ಆ ಅಡುಗೆಯ ಮನೆಯ ಮೇಲೆ ಹೋಗುತ್ತ, ನಾನಾ ಪ್ರಕಾರವಾದ ಮೀನು ಮಾಂಸಗಳನ್ನು ಕಂಡು ಹಸಿವು ಹುಟ್ಟಿ "ಇದನ್ನು ತಿನ್ನಲು ಹೇಗೆ ಅವಕಾಶ ಸಾಧ್ಯವಾದೀತು?" ಎಂದು ಚಿಂತಿಸುತ್ತ, ಬೋಧಿಸತ್ವನನ್ನು ಕಂಡು "ಇದನ್ನು ಆಶ್ರಯಿಸಿದರೆ ಸಾಧ್ಯ" ಎಂದು ಸಂಕಲ್ಪಿಸಿ, ಅದು ಆಹಾರಕ್ಕಾಗಿ ಕಾಡಿಗೆ ಹೋಗುವಾಗ ಅದರ ಹಿಂದೆ ಹಿಂದೆ ಹೋಯಿತು.

ಆಗ ಬೋಧಿಸತ್ವನು "ಕಾಗೆ, ನನ್ನ ಆಹಾರ ಬೇರೆ, ನಿನ್ನ ಆಹಾರ ಬೇರೆ. ನನ್ನನ್ನೇಕೆ ಹಿಂಬಾಲಿಸುವೆ?" ಎಂದನು. ಕಾಗೆಯು "ನಿನ್ನ ಕೆಲಸ ನನಗೆ ರುಚಿಸುತ್ತದೆ. ನಾನೂ ನಿನ್ನಂತೆಯೇ ಆಹಾರ ತೆಗೆದುಕೊಳ್ಳುವವನಾಗಿ ನಿನ್ನ ಸೇವೆ ಮಾಡಬಯಸುವೆನು" ಎಂದಿತು ಬೋಧಿಸತ್ವನು ಒಪ್ಪಿದನು. ಕಾಗೆ ಪಾರಿವಾಳದೊಡನೆ ಆಹಾರ ಭೂಮಿಯಲ್ಲಿ ಒಂದೇ ಆಹಾರಕ್ಕೆ ತಿರುಗುವಂತೆ ನಟಿಸಿ, ಗೋಮಯ ರಾಶಿಯನ್ನು ಒಡೆದು ಅದರೊಳಗಿನ ಪ್ರಾಣಿಗಳನ್ನು ತಿಂದು, ಹೊಟ್ಟೆ ತುಂಬಲು ಬೋಧಿಸತ್ವನ ಬಳಿಸಾರಿ "ನೀನು ಎಷ್ಟು ಹೊತ್ತು ತಿರುಗಾಡುತ್ತೀಯೆ! ಊಟದ ಅಳತೆಯೆ ತಿಳಿಯದಲ್ಲ! ಬಾ, ಅತಿ ಸಂಜೆಗೆ ಮೊದಲೇ ಹೋಗೋಣ" ಎಂದಿತು. ಬೋಧಿಸತ್ವನು ಅದನ್ನು ಒಡಗೊಂಡು ತನ್ನ ವಾಸಸ್ಥಾನಕ್ಕೆ ಬಂದನು. ಅಡುಗೆಯವನು ಅದನ್ನು ಕಂಡು, "ನಮ್ಮ ಪಾರಿವಾಳ ಸ್ನೇಹಿತನನ್ನು ಕರೆತಂದಿದೆ" ಎಂದು ಕಾಗೆಗೂ ಒಂದು ಬುಟ್ಟಿ ನಿಲ್ಲಿಸಿದನು. ಕಾಗೆ ನಾಲ್ಕೈದು ದಿನ ಹಾಗೆಯೆ ವಾಸಮಾಡಿತು.

ಆಗ ಒಂದು ದಿನ ಸೆಟ್ಟಿಯು ಬಹಳ ಮೀನು ಮಾಂಸ ತರಿಸಿದನು. ಕಾಗೆ ಅದನ್ನು ಕಂಡು ಲೋಭಕ್ಕೆ ವಶವಾಗಿ ಬೆಳಗಿನಿಂದ ನರಳುತ್ತ ಮಲಗಿತು. ಆ ದಿನ ಬೋಧಿಸತ್ವನು "ಬಾರಯ್ಯ, ಆಹಾರಕ್ಕೆ ಹೋಗೋಣ" ಎಂದನು. ಕಾಗೆ "ನೀನು ಹೋಗು. ನನಗೆ ಅಜೀರ್ಣವಾಗಿದೆ" ಎನ್ನಲು, ಬೋಧಿಸತ್ವನು "ಅಯ್ಯಾ, ಕಾಗೆಗಳಿಗೆ ಅಜೀರ್ಣವೆಂಬುದಿಲ್ಲ. ದೀಪದ

ಬತ್ತಿಯನ್ನು ತೆಗೆದುಕೊಂಡರೂ ನಿಮ್ಮ ಹೊಟ್ಟೆಯಲ್ಲಿ ಕೊಂಚ ಮಾತ್ರ ನಿಲ್ಲುವುದು, ಉಳಿದುದು ಒಳಗೆ ಹೋದ ಕೂಡಲೆ ಜೀರ್ಣವಾಗುವುದು. ನನ್ನ ಮಾತಿನಂತೆ ನಡೆ. ಮೀನು ಮಾಂಸ ಕಂಡು ಹೀಗೆ ಮಾಡಬೇಡ" ಎಂದನು. ಕಾಗೆಯು "ಹೀಗೇಕೆ ಹೇಳುವಿರಿ, ಸ್ವಾಮಿ? ನನಗೆ ಅಜೀರ್ಣವೇ" ಎನ್ನಲು "ಹಾಗಾದರೆ ಜಾಗರೂಕನಾಗಿರು" ಎಂದು ಬುದ್ಧಿಹೇಳಿ ಬೋಧಿಸತ್ವನು ಹೋದನು.

ಅಡುಗೆಯುವನು ನಾನಾರೀತಿಯ ಮೀನುಮಾಂಸಗಳನ್ನು ಅಣಿ ಮಾಡಿ, ಮೈಯಿಂದ ಬೆವರು ತೆಗೆಯುತ್ತ, ಅಡುಗೆಯ ಮನೆ ಬಾಗಿಲಿನಲ್ಲಿ ನಿಂತಿದ್ದನು. ಕಾಗೆಯು 'ಮಾಂಸ ತಿನ್ನುವುದಕ್ಕೆ ಇದು ಸಮಯ' ಎಂದು ಹೋಗಿ, ರಸದ ಬಟ್ಟಲ ಮೇಲೆ ಕುಳಿತಿತು. ಅಡುಗೆಯುವನು 'ಕಿಳೀ' ಎಂಬ ಸದ್ದನ್ನು ಕೇಳಿ, ಸುತ್ತಲೂ ನೋಡಿ, ಕಾಗೆಯನ್ನು ಕಂಡು, ಒಳಗೆ ಬಂದು ಅದನ್ನು ಹಿಡಿದುಕೊಂಡು ಸಕಲ ಶರೀರವನ್ನೂ ಕಿತ್ತು, ತಲೆಯಲ್ಲಿ ಮಾತ್ರ ಜುಟ್ಟನ್ನು ನಿಲ್ಲಿಸಿ, ಶೃಂಗಿಬೇರ ಜೀರಿಗೆ ಮೊದಲಾದವನ್ನು ಅರೆದು ಮಜ್ಜಿಗೆಯಲ್ಲಿ ಕಲಸಿ, "ನೀನು ನಮ್ಮ ಸೆಟ್ಟಿಯ ಮೀನುಮಾಂಸವನ್ನು ಎಂಜಲುಮಾಡುವೆಯ?" ಎಂದು ಅದರ ಮೈಗೆಲ್ಲ ಬಳಿದು, ಎಸೆದು ಹಕ್ಕಿಯ ಗೂಡಿನಲ್ಲಿ ಬೀಳಿಸಿದನು. ಅದಕ್ಕೆ ಬಲವಾದ ನೋವಾಯಿತು.

ಬೋಧಿಸತ್ವನು ಆಹಾರಭೂಮಿಯಿಂದ ಬಂದು, ಅದು ನರಳುವುದನ್ನು ಕಂಡು, ಅದನ್ನು ಅಣಕಿಸಲು ಈ ಮೊದಲ ಗಾಹೆ ಹೇಳಿದನು:

"ಮೋಡದ ಮೊಮ್ಮಗನಾದ ಈ ಜುಟ್ಟಿನ ಕೊಕ್ಕರೆ ಯಾರು? ಹೊರಗೆ ಬಾ, ಕೊಕ್ಕರೆ. ನನ್ನ ಸ್ನೇಹಿತನಾದ ಕಾಗೆ ಕ್ರೂರಿ."

ಅದನ್ನು ಕೇಳಿ ಕಾಗೆ ಎರಡನೆಯ ಗಾಹೆ ಹೇಳಿತು:

"ನಾನು ಜುಟ್ಟಿನ ಕೊಕ್ಕರೆಯಲ್ಲ. ನಾನು ಅತಿಆಸೆಯ ಕಾಗೆ. ನಿನ್ನ ಮಾತಿನಂತೆ ನಡೆಯದೆ ನಾನು ಬೋಳಾದೆ. ನೋಡು."

ಅದನು ಕೇಳಿ ಬೋಧಿಸತ್ವನು ಮೂರನೆಯ ಗಾಹೆ ಹೇಳಿದನು:

“ನಿನಗೆ ಪುನಃ ಹೀಗೆಯೇ ಆಗುವುದು. ನಿನ್ನ ನಡತೆಯೇ ಅಂತಹದು. ಮನುಷ್ಯರು ತಿನ್ನುವುದನ್ನು ಹಕ್ಕಿಗಳು ತಿನ್ನಬಾರದು.”

**ಬೋಧಿ**ಸತ್ವನು ಹೀಗೆಂದು ಹೇಳಿ, “ಇನ್ನು ಮೇಲೆ ನಾನು ಇಲ್ಲಿ ವಾಸಮಾಡಲಾರೆ” ಎಂದು ಮೇಲೆದ್ದು ಬೇರೆ ಕಡೆ ಹೋಯಿತು. ಕಾಗೆಯು ನರಳುತ್ತ ಅಲ್ಲಿಯೇ ಸತ್ತಿತು.

## ಜವಶಕುನ ಜಾತಕ (೩೦೮)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ವನು ಹಿಮವಂತ ಪ್ರದೇಶದಲ್ಲಿ ಮರಕುಟಿಕನ ಹಕ್ಕಿಯಾಗಿ ಹುಟ್ಟಿದನು. ಒಂದು ಸಿಂಹವು ಮಾಂಸ ತಿನ್ನುವಾಗ ಅದರ ಗಂಟಲಲ್ಲಿ ಮೂಳೆ ಸಿಕ್ಕಿತು; ಗಂಟಲು ಊದಿತು; ಆಹಾರ ತೆಗೆದುಕೊಳ್ಳಲಾರದಾಯಿತು; ತೀವ್ರವಾದ ವೇದನೆಯಾಯಿತು. ಆಗ ಆಹಾರ ಹುಡುಕುತ್ತಿದ್ದ ಆ ಹಕ್ಕಿಯು ಅದನ್ನು ಕಂಡು, ಕೊಂಬೆಯಲ್ಲಿ ಕುಳಿತು “ನಿನಗೆ ಏನಯ್ಯ ದುಃಖ?” ಎಂದು ಪ್ರಶ್ನಿಸಿತು. ಅದು ಇದ್ದುದನ್ನು ತಿಳಿಸಿತು.

“ಅಯ್ಯಾ, ನಾನು ಈ ಮೂಳೆಯನ್ನು ತೆಗೆಯಬಲ್ಲೆ. ಆದರೆ, ಭಯದಿಂದ ನಿನ್ನ ಬಾಯನ್ನು ಪ್ರವೇಶಿಸಲಾರೆ. ನೀನು ನನ್ನನ್ನು ತಿಂದೀಯೆ” ಎಂದಿತು ಹಕ್ಕಿ. ಸಿಂಹವು “ಹೆದರಬೇಡಯ್ಯ, ನಾನು ನಿನ್ನನ್ನು ತಿನ್ನುವುದಿಲ್ಲ. ನನ್ನನ್ನು ಬದುಕಿಸು” ಎನ್ನಲು, ಹಕ್ಕಿಯು ಹಾಗೆಯೇ ಆಗಲೆಂದು ಅದನ್ನು ಮಗ್ಗುಲಾಗಿ ಮಲಗಿಸಿ, “ಇದು ಹೀಗೇ ಮಾಡುವುದೆಂದು ಯಾರು ಬಲ್ಲರು?” ಎಂದು ಚಿಂತಿಸಿ, ಅದು ಬಾಯಿ ಮುಚ್ಚಲಾರದಂತೆ ಅದರ ಮೇಲುಕೀಳಿನ ವಸಡುಗಳ ನಡುವೆ ದೊಣ್ಣೆಯನ್ನು ನಿಲ್ಲಿಸಿ, ಬಾಯನ್ನು ಹೊಕ್ಕು, ಮೂಳೆಯ ತುದಿಯನ್ನು ಕೊಕ್ಕಿನಿಂದ ಬಡಿಯಿತು. ಮೂಳೆ ಬಿದ್ದುಹೋಯಿತು. ಹೀಗೆ ಮೂಳೆಯನ್ನು ಬೀಳಿಸಿ ಸಿಂಹದ ಬಾಯಿಂದ ಹೊರಬರುತ್ತ ದೊಣ್ಣೆಯನ್ನೂ ಕೊಕ್ಕಿನಿಂದ ಹೊಡೆದು ಬೀಳಿಸಿ ಹೊರಟು, ಕೊಂಬೆಯ ತುದಿಯಲ್ಲಿ ಕುಳಿತಿತು.

ಸಿಂಹವು ರೋಗವಿಲ್ಲದುದಾಗಿ, ಒಂದು ದಿವಸ ಕಾಡುಕೋಣವನ್ನು ಕೊಂದು ತಿನ್ನುತ್ತಿತ್ತು. ಮರಕುಟಿಕನ ಹಕ್ಕಿಯು ಅದನ್ನು ಪರೀಕ್ಷೆ ಮಾಡೋಣವೆಂದು ಅದರ ಮೇಲಿನ ಕೊಂಬೆಯಲ್ಲಿ ಕುಳಿತು, ಅದರೊಡನೆ ಮಾತನಾಡುತ್ತ ಮೊದಲ ಗಾಹೆ ಹೇಳಿತು:

"ನನಗೆ ಶಕ್ತಿಯಿದ್ದಷ್ಟು ಕೆಲಸವನ್ನು ನಾನು ನಿನಗೆ ಮಾಡಿದೆ. ನಮಸ್ಕಾರ, ಮೃಗರಾಜ. ಈಗ ನನಗೆ ಏನಾದರೂ ದೊರಕುವುದೆ?"

ಅದನ್ನು ಕೇಳಿ ಸಿಂಹ ಎರಡನೆಯ ಗಾಹೆ ಹೇಳಿತು:

"ರಕ್ತವನ್ನು ಊಡುವ, ಸದಾ ಬೇಟೆಯಾಡುವ, ನನ್ನ ಹಲ್ಲಿನ ನಡುವೆ ಹೋಗಿ ನೀನು ಇನ್ನೂ ಸುಖವಾಗಿ ಬದುಕಿರುವುದು ಹೆಚ್ಚು!"

ಅದನ್ನು ಕೇಳಿ ಹಕ್ಕಿಯು ಉಳಿದ ಎರಡು ಗಾಹೆಗಳನ್ನು ಹೇಳಿತು:

"ಕೃತಜ್ಞತೆಯಿಲ್ಲದವನು ಮಾಡಿದುದಕ್ಕೆ ಬದಲುಮಾಡುವುದಿಲ್ಲ. ಕೃತಜ್ಞತೆಯಿಲ್ಲದವನನ್ನು ಸೇವಿಸುವುದು ನಿರರ್ಥಕ.

"ಯಾವನಿಗೆ ಮಾಡಿದ ಕಾರ್ಯದಿಂದ ಮಿತ್ರಧರ್ಮ ಲಭಿಸುವುದಿಲ್ಲವೋ ಅಂತಹವನನ್ನು ಬಿಟ್ಟು, ಅಸೂಯೆಯಿಲ್ಲದೆ ಕೋಪವಿಲ್ಲದೆ ಮೆಲ್ಲಮೆಲ್ಲನೆ ದೂರವಾಗಬೇಕು."

ಹೀಗೆಂದು ಹೇಳಿ, ಹಕ್ಕಿಯು ಹೋಯಿತು.

## ಚರ್ಮಶಾಟಕ ಜಾತಕ (೩೨೪)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ವ್ಯಾಪಾರಿಗಳ ಮನೆಯಲ್ಲಿ ಹುಟ್ಟಿ ವ್ಯಾಪಾರಮಾಡುತ್ತಿದ್ದನು.

ಆಗ, ಚರ್ಮ ಹೊದೆದ ಪರಿವ್ರಾಜಕನೊಬ್ಬನು ಭಿಕ್ಷೆಗಾಗಿ ವಾರಣಾಸಿಯಲ್ಲಿ ಸಂಚಾರಮಾಡುತ್ತ, ಟಗರುಗಳು ಕಾಳಗವಾಡುವ ಸ್ಥಳಕ್ಕೆ ಬಂದನು. ಅಲ್ಲಿ ಒಂದು ಟಗರು ಹಿಂದು ಹಿಂದಕ್ಕೆ ಹೋಗುವುದನ್ನು

ಕಂಡು, ಅದು ತನಗೆ ಮರ್ಯಾದೆ ತೋರಿಸುತ್ತಿದೆಯೆಂದು ತಿಳಿದನು. ಹಾಗೆ ತಿಳಿದು, ಹಿಂದಿರುಗಿ ಹೋಗದೆ "ಇಷ್ಟು ಜನರ ನಡುವೆ ಈ ಟಗರು ಒಂದಕ್ಕೇ ನನ್ನ ಗುಣ ಗೊತ್ತು" ಎಂದು ಅದಕ್ಕೆ ಕೈಮುಗಿದು ನಿಂತು,

"ಈ ನಾಲ್ಕು ಕಾಲಿನ ಪ್ರಾಣಿಯು ರೂಪ ಸುಂದರವಾಗಿದೆ. ಇದರ ನಡತೆ ಪ್ರಿಯವಾಗಿದೆ. ಇದು ಒಳ್ಳೆಯ ಪ್ರಾಣಿ. ಜಾತಿ ಮಂತ್ರಗಳಿಂದ ಕೂಡಿದ ಬ್ರಾಹ್ಮಣನನ್ನು ಪೂಜಿಸುವ ಈ ಶ್ರೇಷ್ಠವಾದ ಟಗರಿಗೆ ಯಶಸ್ಸು ಬರುವುದು"
ಎಂದು ಮೊದಲನೆಯ ಗಾಹೆ ಹೇಳಿದನು.

ಆಗ ಅಂಗಡಿಯಲ್ಲಿ ಕುಳಿತಿದ್ದ ಪಂಡಿತ ವ್ಯಾಪಾರಿಯು ಆ ಪರಿವ್ರಾಜಕನನ್ನು ತಡೆಯಬೇಕೆಂದು

"ಬ್ರಾಹ್ಮಣ, ಒಂದು ಕ್ಷಣಕಾಲ ಕಂಡುದರಿಂದಲೇ ಚತುಷ್ಪಾದಗಳಲ್ಲಿ ವಿಶ್ವಾಸವಿಡಬೇಡ. ಜೋರಾಗಿ ಹೊಡೆಯಬೇಕೆಂದು ಬಯಸಿ ಅದು ಹಿಂದು ಹಿಂದಕ್ಕೆ ಹೋಗುತ್ತದೆ. ಬಲವಾಗಿ ಹೊಡೆಯುತ್ತದೆ"
ಎಂದು ಎರಡನೆಯ ಗಾಹೆ ಹೇಳಿದನು.

ಆ ಪಂಡಿತ ವ್ಯಾಪಾರಿಯು ಹೀಗೆ ಮಾತನಾಡುತ್ತಿರುವಾಗಲೇ ಟಗರು ವೇಗದಿಂದ ಬಂದು ಆ ಪರಿವ್ರಾಜಕನ ತೊಡೆಗೆ ಹೊಡೆಯಿತು. ಅಲ್ಲಿಯೇ ನೋವನ್ನು ಉಂಟುಮಾಡಿ ಅವನನ್ನು ಬೀಳಿಸಿತು. ಅವನು ನೋವಿನಿಂದ ನರಳುತ್ತ ಮಲಗಿದನು.

ಗುರು ಆ ಕಾರಣವನ್ನು ಪ್ರಕಾಶಪಡಿಸಲು

"ಮೊಳೆ ಮುರಿಯಿತು, ಭಿಕ್ಷಾಪಾತ್ರೆ ಉರುಳಿತು, ಬ್ರಾಹ್ಮಣನ ಐಶ್ವರ್ಯವೆಲ್ಲ ಇಲ್ಲಿ ಚೂರಾಯಿತು; ಈಗ ತೋಳು ನೀಡಿ ಗೋಳಾಡುವನು. ಓಡಿರಿ! ಬ್ರಹ್ಮಚಾರಿ ಸಾಯುವನು!"
ಎಂದು ಮೂರನೆಯ ಗಾಹೆ ಹೇಳಿದನು.

ಪರಿವ್ರಾಜಕನು

"ಪೂಜಿಸಬಾರದವನನ್ನು ಪೂಜಿಸಿದರೆ, ಇಂದು ಬುದ್ಧಿಯಿಲ್ಲದೆ ನಾನು ಟಗರಿನಿಂದ ಹತನಾದ ಹಾಗೆ, ಹೀಗೆಯೇ ಕೇಡಾಗುವುದು"
ಎಂದು ನಾಲ್ಕನೆಯ ಗಾಹೆ ಹೇಳಿ ನರಳುತ್ತ ಅಲ್ಲಿಯೇ ಸತ್ತನು.

## ಬಾವೆರು ಜಾತಕ (೩೩೯)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ನವಿಲಿನ ಹೊಟ್ಟೆಯಲ್ಲಿ ಹುಟ್ಟಿ, ಬೆಳೆಬೆಳೆಯುತ್ತ ಸೌಭಾಗ್ಯವನ್ನು ಹೊಂದಿ ಕಾಡಿನಲ್ಲಿ ತಿರುಗಾಡುತ್ತಿದ್ದನು.

ಆ ಕಾಲದಲ್ಲಿ ಕೆಲವರು ವ್ಯಾಪಾರಿಗಳು ದಿಕ್ಕುತೋರಿಸುವ ಕಾಗೆಯೊಂದನ್ನು ಹಿಡಿದುಕೊಂಡು ನಾವೆಯಲ್ಲಿ ಬಾವೆರುರಾಷ್ಟ್ರಕ್ಕೆ ಬಂದರು. ಆ ಕಾಲದಲ್ಲಿ ಬಾವೆರುರಾಷ್ಟ್ರದಲ್ಲಿ ಹಕ್ಕಿಯೆಂಬುದೇ ಇರಲಿಲ್ಲ. ಆ ರಾಷ್ಟ್ರದವರು ನಾವೆಯ ಕಂಬದ ತುದಿಯಲ್ಲಿ ಕುಳಿತಿದ್ದ ಕಾಗೆಯನ್ನು ಕಂಡು, "ಇದರ ಮೈಬಣ್ಣವನ್ನೂ ಕತ್ತಿನ ತುದಿಯ ಕೊಕ್ಕುಮುಖವನ್ನೂ ಮಣಿಯಗುಂಡಿನಂತಹ ಕಣ್ಣುಗಳನ್ನೂ ನೋಡಿರಿ!" ಎಂದು ಕಾಗೆಯನ್ನೇ ಪ್ರಶಂಸಿಸುತ್ತ "ಆರ್ಯರೆ, ಈ ಹಕ್ಕಿಯನ್ನು ನಮಗೆ ಕೊಡಿರಿ. ನಮಗೆ ಇದು ಬೇಕಾಗಿದೆ. ನಿಮಗೆ ನಿಮ್ಮ ರಾಜ್ಯದಲ್ಲಿ ಬೇರೆ ದೊರಕುವುದು" ಎಂದು ಆ ವ್ಯಾಪಾರಿಗಳಿಗೆ ಹೇಳಿದರು. ಅವರು "ಹಾಗಾದರೆ, ಬೆಲೆ ಕೊಟ್ಟು ಕೊಳ್ಳಿರಿ" ಎಂದರು. "ಒಂದು ಕಾರ್ಷಾಪಣಕ್ಕೆ ಕೊಡಿರಿ" ಎಂದರು. "ಕೊಡವೊಲ್ಲೆವು" ಎಂದರು. ಕ್ರಮವಾಗಿ ಬೆಲೆಯನ್ನು ಹೆಚ್ಚಿಸಿ "ನೂರು ಹಣಕ್ಕೆ ಕೊಡಿರಿ" ಎನ್ನಲು, "ಇದರಿಂದ ನಮಗೆ ಬಹು ಉಪಕಾರವಾಗುತ್ತಿದೆ. ಆದರೂ ನಿಮ್ಮೊಡನೆ ಸ್ನೇಹವಾಗಲಿ" ಎಂದು ನೂರು ಕಾರ್ಷಾಪಣಗಳನ್ನು ಕೊಂಡು, ಕಾಗೆಯನ್ನು ಅವರಿಗೆ ಕೊಟ್ಟರು. ಅವರು ಅದನ್ನು ಕೊಂಡು, ಚಿನ್ನದ ಪಂಜರದಲ್ಲಿಟ್ಟು, ನಾನಾ ಪ್ರಕಾರವಾದ ಮೀನು ಮಾಂಸಗಳಿಂದಲೂ ಫಲಾಫಲಗಳಿಂದಲೂ ಅದನ್ನು ಉಪಚರಿಸಿದರು. ಬೇರೆ ಹಕ್ಕಿಗಳನ್ನು ಕಾಣದಿದ್ದ ಕಡೆ ಹತ್ತು ಅಸದ್ಧರ್ಮಗಳಿಂದ ಕೂಡಿದ ಕಾಗೆಯು ಬಹುವಾದ ಲಾಭಯಶಸ್ಸುಗಳನ್ನು ಪಡೆಯಿತು.

ಆ ವ್ಯಾಪಾರಿಗಳು, ಇನ್ನೊಂದು ಸಲ ಒಂದು ಮಯೂರ ರಾಜನನ್ನು ತೆಗೆದುಕೊಂಡು, ಚಿಟಿಕೆ ಹೊಯ್ದರೆ ಕೇಕೆ ಹಾಕುವುದನ್ನೂ ಚಪ್ಪಾಳೆ ತಟ್ಟಿದರೆ ಕುಣಿಯುವುದನ್ನೂ ಅದಕ್ಕೆ ಕಲಿಸಿ, ಬಾವೆರುರಾಷ್ಟ್ರಕ್ಕೆ

ಬಂದರು. ಅದು, ಮಹಾಜನಗಳು ಕೂಡಿಸೇರಲು, ನಾವೆಯ ಮುಂಭಾಗದಲ್ಲಿ ನಿಂತು, ರೆಕ್ಕೆಗಳನ್ನು ಅಲುಗಿಸುತ್ತ ಮಧುರಸ್ವರವನ್ನು ಹೊರಡಿಸಿ ಕುಣಿಯಿತು. ಜನರು ಅದನ್ನು ಕಂಡು ಸಂತೋಷಗೊಂಡು, "ಆರ್ಯರೆ, ಸೌಭಾಗ್ಯವಂತನೂ ಸುಶಿಕ್ಷಿತನೂ ಆದ ಈ ಪಕ್ಷಿರಾಜನನ್ನು ನಮಗೆ ಕೊಡಿರಿ" ಎಂದರು. ವ್ಯಾಪಾರಿಗಳು "ನಾವು ಮೊದಲು ಕಾಗೆ ತಂದೆವು, ಅದನ್ನು ತೆಗೆದುಕೊಂಡಿರಿ. ಈಗ ಈ ಮಯೂರರಾಜನನ್ನು ತಂದಿರುವೆವು, ಇದನ್ನೂ ಬೇಡುವಿರಿ. ನಿಮ್ಮ ರಾಷ್ಟ್ರದಲ್ಲಿ ಹಕ್ಕಿಯೆಂಬುದನ್ನು ಕೊಂಡುಬರುವುದಕ್ಕೇ ಆಗುವುದಿಲ್ಲ" ಎಂದರು. ಬಾವೆರುರಾಷ್ಟ್ರದವರು, "ಆಗಲಿ, ಆರ್ಯರೆ, ನಿಮ್ಮ ರಾಜ್ಯದಲ್ಲಿ ಬೇರೊಂದು ಸಿಕ್ಕುವುದು. ಇದನ್ನು ನಮಗೆ ಕೊಡಿರಿ" ಎಂದು ಬೆಲೆಯನ್ನು ಹೆಚ್ಚಿಸಿ ಸಾವಿರಕ್ಕೆ ಅದನ್ನು ಕೊಂಡುಕೊಂಡರು. ಆಗ ಅದನ್ನು ಸಪ್ತರತ್ನಗಳಿಂದ ಚಿತ್ರವಾಗಿ ಮಾಡಿದ ಪಂಜರದಲ್ಲಿಟ್ಟು, ಮೀನು ಮಾಂಸಗಳಿಂದಲೂ ಫಲಾಫಲಗಳಿಂದಲೂ ಜೇನು ಅರಳು ಸಕ್ಕರೆಪಾನಕ ಮೊದಲಾದವುಗಳಿಂದಲೂ ಉಪಚರಿಸಿದರು. ಮಯೂರರಾಜನಿಗೆ ಅತಿಯಾದ ಲಾಭ ಯಶಸ್ಸು ದೊರಕಿತು.

ಅದು ಬಂದ ಕಾಲದಿಂದ ಕಾಗೆಯ ಲಾಭ ಸತ್ಕಾರಗಳು ಕಡಮೆಯಾದವು. ಯಾರೂ ಅದನ್ನು ನೋಡಲೂ ಬಯಸಲಿಲ್ಲ. ಕಾಗೆಯು ತಿನ್ನುವುದಕ್ಕೂ ಉಣ್ಣುವುದಕ್ಕೂ ಏನೂ ಸಿಕ್ಕದೆ, ಕಾ ಕಾ ಎಂದು ಕೂಗುತ್ತ ಹೋಗಿ ತಿಪ್ಪೆಯ ಮೇಲೆ ಇಳಿಯಿತು.

"ತುದಿಜುಟ್ಟಿನ, ಮಂಜುಲವಾಗಿ ಮಾತನಾಡುವ ನವಿಲನ್ನು ಕಾಣದುದರಿಂದ ಅಲ್ಲಿ ಕಾಗೆಯನ್ನು ಮಾಂಸಫಲಗಳಿಂದ ಪೂಜಿಸಿದರು. ಸ್ವರಸಂಪತ್ತಿಯಿದ್ದ ನವಿಲು ಬಾವೆರುಗೆ ಬಂದಾಗ ಕಾಗೆಗೆ ಲಾಭ ಸತ್ಕಾರಗಳು ಕಡಮೆಯಾದವು.

"ಧರ್ಮರಾಜನೂ ಬೆಳಕುಉಂಟುಮಾಡುವವನೂ ಆದ ಬುದ್ಧನು ಹುಟ್ಟದ ವರೆಗೆ ಇತರ ಬೇರೆ ಬೇರೆ ಶ್ರಮಣ ಬ್ರಾಹ್ಮಣರನ್ನು ಪೂಜಿಸುತ್ತಿದ್ದರು. ಸ್ವರಸಂಪನ್ನನಾದ ಬುದ್ಧನು ಧರ್ಮವನ್ನು ಉಪದೇಶಿಸಿದಾಗ ತೈರ್ಥಿಕರ ಲಾಭ ಸತ್ಕಾರಗಳು ಕಡಮೆಯಾದವು."

## ಸಂಧಿಭೇದಕ ಜಾತಕ (೩೪೯)

ಹಿಂದೆ ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಅವನ ಮಗನಾಗಿ, ತಕ್ಷಶಿಲೆಯಲ್ಲಿ ವಿದ್ಯೆಗಳನ್ನು ಪಡೆದು, ತಂದೆ ಸತ್ತನಂತರ ಧರ್ಮದಿಂದ ರಾಜ್ಯವಾಳುತ್ತಿದ್ದನು.

ಆಗ ಒಬ್ಬ ಗೋಪಾಲಕನು ಕಾಡಿನಲ್ಲಿ ಗೋಕುಲದ ಗೋಗಳನ್ನು ಕಾಯುತ್ತ, ಹಿಂದಿರುಗುವಾಗ ಒಂದು ಗರ್ಭಿಣಿಯನ್ನು ಗಮನಿಸದೆ ಬಿಟ್ಟುಬಂದನು. ಅದಕ್ಕೆ ಒಂದು ಸಿಂಹಿಯೊಡನೆ ವಿಶ್ವಾಸವುಂಟಾಯಿತು. ಅವು ಎರಡೂ ದೃಢವಾದ ಸ್ನೇಹದಿಂದ ಒಟ್ಟಾಗಿ ತಿರುಗಾಡುತ್ತಿದ್ದವು.

ಅನಂತರ, ಗೋವು ಕರುವನ್ನೂ ಸಿಂಹಿ ಸಿಂಹದ ಮರಿಯನ್ನೂ ಪ್ರಸವಿಸಿದವು. ಆ ಎರಡು ಮರಿಗಳೂ ತಮ್ಮ ಕುಲದಲ್ಲಿ ಬಂದ ಮೈತ್ರಿಯಿಂದ ದೃಢಮಿತ್ರರಾಗಿ ಒಟ್ಟಿಗೆ ತಿರುಗಾಡುತ್ತಿದ್ದವು. ಆಗ ಒಬ್ಬ ವನಚರನು ಅವುಗಳ ವಿಶ್ವಾಸವನ್ನು ಕಂಡು, ಕಾಡಿನಲ್ಲಿ ಬೆಳೆದ ವಸ್ತುಗಳನ್ನು ಕೊಂಡು ವಾರಣಾಸಿಗೆ ಹೋಗಿ, ರಾಜನಿಗೆ ಕೊಟ್ಟನು. ರಾಜನು "ಆದರೆ, ಅಯ್ಯಾ, ಕಾಡಿನಲ್ಲಿ ಏನಾದರೂ ಆಶ್ಚರ್ಯವನ್ನು ಕಂಡೆಯಾ?" ಎಂದು ಪ್ರಶ್ನಿಸಲು, "ದೇವ, ಬೇರೇನೂ ಕಾಣಲಿಲ್ಲ. ಒಂದು ಸಿಂಹವೂ ಗೂಳಿಯೂ ಒಂದನ್ನೊಂದು ವಿಶ್ವಾಸದಿಂದ ಕಂಡು, ಒಂದಾಗಿ ತಿರುಗುವುದನ್ನು ಕಂಡೆ" ಎಂದನು. ಆಗ ರಾಜನು "ಅಲ್ಲಿ ಮೂರನೆಯದು ಯಾವುದಾದರೂ ಬಂದಾಗ ತೊಂದರೆಯಾಗುವುದು. ಅಲ್ಲಿ ಮೂರನೆಯದನ್ನು ಕಂಡಾಗ ನನಗೆ ತಿಳಿಸು" ಎಂದನು. ವನಚರನು ಒಪ್ಪಿ ಹೋದನು.

ವನಚರನು ವಾರಣಾಸಿಗೆ ಹೋಗಲು, ಒಂದು ಸೃಗಾಲವು ಸಿಂಹಗೂಳಿಗಳ ಸೇವೆಗೆ ನಿಂತಿತು. ವನಚರನು ಕಾಡಿಗೆ ಹೋಗಿ, ಅದನ್ನು ಕಂಡು, "ಮೂರನೆಯದು ಉಂಟಾದುದನ್ನು ರಾಜನಿಗೆ ತಿಳಿಸುವೆನು" ಎಂದು ನಗರಕ್ಕೆ ಹೋದನು.

ಇತ್ತ ಸೃಗಾಲವು "ಸಿಂಹದ ಮಾಂಸ ಗೂಳಿಯ ಮಾಂಸಗಳನ್ನು ಬಿಟ್ಟರೆ ನಾನು ಹಿಂದೆ ತಿನ್ನದಿರುವುದು ಯಾವುದೂ ಇಲ್ಲ. ಇವುಗಳ ಒಕ್ಕಟ್ಟನ್ನು ಒಡೆದು ಇವುಗಳ ಮಾಂಸವನ್ನು ತಿನ್ನುವೆನು" ಎಂದು, "ಅದು ನಿನ್ನನ್ನು ಕುರಿತು ಹೀಗೆ ಹೇಳುವುದು" ಎಂದು ಎರಡನ್ನೂ ಒಂದನ್ನೊಂದರಿಂದ ಒಡೆದು, ಬೇಗ ಜಗಳ ತಂದಿಟ್ಟು, ಅವು ಸಾಯುವಂತೆ ಮಾಡಿತು.

ವನಚರನು ವಾರಣಾಸಿಗೆ ಹೋಗಿ "ಅವುಗಳ ನಡುವೆ ಮೂರನೆಯದು ಬಂತು, ದೇವ" ಎಂದು ರಾಜನಿಗೆಂದನು. "ಯಾರದು?" "ಸೃಗಾಲ, ದೇವ." ರಾಜನು "ಅದು ಅವೆರಡನ್ನೂ ಮುರಿದು ಸಾಯಿಸುವುದು. ಅವು ಸಾಯುವ ವೇಳೆಗೆ ನಾವು ಸೇರಬಹುದು" ಎಂದು ಹೇಳಿ, ರಥವನ್ನು ಏರಿ, ವನಚರನು ತೋರಿಸಿದ ಮಾರ್ಗದಿಂದ ಹೋಗಿ, ಅವು ಒಂದರೊಡನೊಂದು ಕಲಹವಾಡಿ ಸಾಯುವ ವೇಳೆಗೆ ಸೇರಿದನು. ಸೃಗಾಲವು ತೃಪ್ತಿ ಹರ್ಷಗಳಿಂದ ಒಂದು ಸಲ ಸಿಂಹದ ಮಾಂಸವನ್ನೂ ಒಂದು ಸಲ ಗೂಳಿಯ ಮಾಂಸವನ್ನೂ ತಿನ್ನುತ್ತಿತ್ತು.

ಅವು ಎರಡೂ ಸತ್ತುದನ್ನು ಕಂಡು, ರಾಜನು ರಥದಲ್ಲಿ ನಿಂತುಕೊಂಡೇ ಸಾರಥಿಯೊಡನೆ ಮಾತನಾಡುತ್ತ ಈ ಗಾಥೆಗಳನ್ನು ಹೇಳಿದನು:

"ಸಾರಥಿ, ಸ್ತ್ರೀಗಳಾಗಲಿ ತಿನ್ನುವ ವಸ್ತುಗಳಾಗಲಿ ಈ ಎರಡಕ್ಕೂ ಸಮಾನವಾಗಿರಲಿಲ್ಲ. ಆದರೂ ಇವುಗಳ ಒಕ್ಕಟ್ಟನ್ನು ಭೇದಿಸಿದ ಸೃಗಾಲ ಹೇಗೆ ಚಿಂತಿಸಿತು, ನೋಡು.

"ಚಾಡಿಯನ್ನು ಹರಿತವಾದ ಕತ್ತಿಯಂತೆ ಮಾಂಸದಲ್ಲಿ ಸುತ್ತ ತಿರುಗಿಸಿ ಈ ಅಧಮಮೃಗವು ಗೂಳಿ ಸಿಂಹಗಳನ್ನು ತಿನ್ನುತ್ತಿದೆ.

"ಇಲ್ಲಿ ಮಲಗಿರುವವುಗಳನ್ನು ನೋಡು, ಸಾರಥಿ. ಒಕ್ಕಟ್ಟು ಒಡೆಯುವ ಚಾಡಿಕೋರರ ಮಾತನ್ನು ಗಮನಿಸಿದವರೂ ಹೀಗೆಯೇ ಮಲಗುವರು.

"ಸಾರಥಿ, ಒಕ್ಕಟ್ಟು ಒಡೆಯುವವರ ಮಾತನ್ನು ಗಮನಿಸದವರು, ಸ್ವರ್ಗಕ್ಕೆ ಹೋದವರಂತೆ, ಸುಖ ಪಡೆಯುವರು."

ರಾಜನು ಈ ಗಾಹೆಗಳನ್ನು ಹೇಳಿ, ಸಿಂಹದ ಕೇಸರ ಚರ್ಮ ಉಗುರು ದಾಡೆಗಳನ್ನು ತೆಗೆಸಿಕೊಂಡು ನಗರಕ್ಕೆ ಹೋದನು.

## ಕುಕ್ಕುಟ ಜಾತಕ (೩೮೩)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಕಾಡಿನಲ್ಲಿ ಕೋಳಿಯ ಹೊಟ್ಟೆಯಲ್ಲಿ ಹುಟ್ಟಿ, ಅನೇಕ ನೂರು ಕೋಳಿಗಳ ಪರಿವಾರದೊಡನೆ ಕಾಡಿನಲ್ಲಿ ವಾಸಿಸುತ್ತಿದ್ದನು. ಅಲ್ಲಿಗೆ ಸ್ವಲ್ಪ ದೂರದಲ್ಲಿ ಒಂದು ಹೆಣ್ಣು ಬೆಕ್ಕು ವಾಸಮಾಡುತ್ತಿತ್ತು. ಅದು ಬೋಧಿಸತ್ವನನ್ನು ಬಿಟ್ಟು ಉಳಿದ ಕೋಳಿಗಳನ್ನು ಉಪಾಯದಿಂದ ವಂಚಿಸಿ ತಿಂದಿತು. ಬೋಧಿಸತ್ವನು ಅದರ ಹಿಡಿತಕ್ಕೆ ಸಿಕ್ಕುತ್ತಿರಲಿಲ್ಲ.

"ಈ ಕೋಳಿಗೆ ಬಹು ಚಾತುರ್ಯವಿದೆ. ನನ್ನ ಚಾತುರ್ಯವನ್ನೂ ಉಪಾಯ ಕೌಶಲ್ಯವನ್ನೂ ಇದು ತಿಳಿಯದು. ನಿನ್ನ ಹೆಂಡತಿಯಾಗುವೆನೆಂದು ಇದನ್ನು ಪುಸಲಾಯಿಸಿ, ನನಗೆ ವಶವಾಗುವ ಸಮಯದಲ್ಲಿ ತಿಂದು ಬಿಡುವೆನು" ಎಂದು ಆ ಬೆಕ್ಕು ಕೋಳಿ ಕುಳಿತಿದ್ದ ಮರದ ಬುಡಕ್ಕೆ ಹೋಗಿ, ಮೊದಲು ಅದರ ಬಣ್ಣವನ್ನು ವರ್ಣಿಸುತ್ತ ಮಾತನಾಡಿ ಅದನ್ನು ಬೇಡುತ್ತ ಮೊದಲ ಗಾಹೆ ಹೇಳಿತು:

"ಒಳ್ಳೆಯ ಚಿತ್ರವಾದ ರೆಕ್ಕೆಗಳಿಂದ ಮುಚ್ಚಿದವನೆ, ಉದ್ದವಾದ ಜುಟ್ಟಿನ ಹಕ್ಕಿಯೆ, ಮರದ ಕೊಂಬೆಯಿಂದ ಕೆಳಗೆ ಇಳಿ. ಬೆಲೆ ಏನೂ ಇಲ್ಲದೆಯೆ ನಾನು ನಿನ್ನ ಹೆಂಡತಿಯಾಗುವೆನು."

ಬೋಧಿಸತ್ವನು ಅದನ್ನು ಕೇಳಿ, "ಇದು ನನ್ನ ಎಲ್ಲಾ ಜ್ಞಾತಿಗಳನ್ನೂ ತಿಂದಿತು. ಈಗ ನನ್ನನ್ನೂ ಪುಸಲಾಯಿಸಿ ತಿನ್ನಬಯಸುವುದು. ಇದನ್ನು ತೊಲಗಿಸುವೆನು" ಎಂದು ಚಿಂತಿಸಿ, ಎರಡನೆಯ ಗಾಹೆ ಹೇಳಿದನು:

"ನಿನಗೆ ನಾಲ್ಕು ಕಾಲು, ಕಲ್ಯಾಣಿ. ನನಗೆ ಎರಡು ಕಾಲು, ಮನೋರಮೆ. ಮೃಗಪಕ್ಷಿಗಳು ಕೂಡುವುದು ತಕ್ಕುದಲ್ಲ. ಬೇರೆ ಗಂಡನನ್ನು ಹುಡುಕು."



**ಲೋಲ ಜಾತಕ (೨೭೪)** [ಪುಟ ೩೪

(Copyright : Archæological Survey of India)

ಆಗ ಅದು "ಇದು ಅತಿ ಚತುರ. ಏನಾದರೂ ಉಪಾಯದಿಂದ ಇದನ್ನು ವಂಚಿಸಿ ತಿನ್ನುವೆನು" ಎಂದು ಚಿಂತಿಸಿ, ಮೂರನೆಯ ಗಾಹೆ ಹೇಳಿತು :

"ನಾನು ಕುಮಾರಿ, ಮಧುರವಾಗಿ ಪ್ರಿಯವಾಗಿ ಮಾತನಾಡುವೆನು. ಹೆಂಡತಿಯಾಗಿ ಪಡೆಯಲು ಅರ್ಹಳಾದವಳು. ನಾನು ಬೇಡವಾದರೆ, ದಾಸಿಯನ್ನಾಗಿ ಮಾಡಿಕೊ."

ಆಗ ಬೋಧಿಸತ್ವನು 'ಇದನ್ನು ಹಂಗಿಸಿ ಓಡಿಸಬೇಕಾದೀತು' ಎಂದು ಚಿಂತಿಸಿ, ನಾಲ್ಕನೆಯ ಗಾಹೆ ಹೇಳಿದನು:

"ಹಕ್ಕಿಗಳನ್ನು ತಿಂದವಳೆ! ರಕ್ತ ಕುಡಿದವಳೆ! ಕೋಳಿಮರಿಗಳನ್ನು ಕದ್ದವಳೆ! ತಕ್ಕುದಾದ ಬಯಕೆಯಿಂದ ನೀನು ನನ್ನನ್ನು ಗಂಡನನ್ನಾಗಿ ಬಯಸುತ್ತಿಲ್ಲ."

ಹೀಗೆ ಅದನ್ನು ಓಡಿಸಲು, ಅದು ಹೋಯಿತು. ಪುನಃ ಅದರ ಕಡೆ ಕಣ್ಣೆತ್ತಿ ಕೂಡ ನೋಡಲಾಗದೆ ಹೋಯಿತು.

## ವರ್ತಕ ಜಾತಕ (೩೯೪)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ವರ್ತಕಪಕ್ಷಿಯ ಹೊಟ್ಟೆಯಲ್ಲಿ ಹುಟ್ಟಿ, ಕಾಡಿನಲ್ಲಿ ಒರಟು ಹುಲ್ಲು ಬೀಜಗಳನ್ನು ಆಹಾರವಾಗಿ ಪಡೆದು ವಾಸಿಸುತ್ತಿದ್ದನು. ಆಗ, ವಾರಣಾಸಿಯಲ್ಲಿದ್ದ ಒಂದು ಅತ್ಯಾಶೆಯ ಕಾಗೆಯು ಆನೆಯ ಹೆಣ ಮುಂತಾದುವನ್ನು ತಿಂದು ತೃಪ್ತಿಯಾಗದೆ "ಇದಕ್ಕಿಂತ ಬಹು ಮೇಲಾದುದನ್ನು ಪಡೆಯುವೆನು" ಎಂದು ಕಾಡನ್ನು ಪ್ರವೇಶಿಸಿ, ಫಲಾಫಲಗಳನ್ನು ತಿನ್ನುವ ಬೋಧಿಸತ್ವನನ್ನು ಕಂಡು, "ಈ ವರ್ತಕದ ಶರೀರ ಅತಿ ದಪ್ಪನಾಗಿದೆ. ಮಧುರವಾದ ಆಹಾರವನ್ನು ತಿನ್ನುವಂತೆ ತೋರುತ್ತದೆ. ಇದರ ಆಹಾರವೇನೆಂದು ಕೇಳಿ, ಅದನ್ನು ನಾನೂ ತಿಂದು ದಪ್ಪನಾಗುವೆನು" ಎಂದು ಚಿಂತಿಸಿ, ಬೋಧಿಸತ್ವನ ಮೇಲಿನ ಕೊಂಬೆಯಲ್ಲಿ ಕುಳಿತಿತು.

ಬೋಧಿಸತ್ವನು, ಅದು ಕೇಳದಿದ್ದರೂ, ಅದರೊಡನೆ ಉಪಚಾರದ ಮಾತನಾಡುತ್ತ ಮೊದಲ ಗಾಹೆ ಹೇಳಿದನು :

" ಮಾವ, ಸೊಗಸಾದ ಊಟವನ್ನೂ ಎಣ್ಣೆ ತುಪ್ಪಗಳನ್ನೂ ತಿನ್ನುತ್ತೀಯೆ. ಆದರೂ ಹೀಗೇಕೆ ಕೃಶನಾಗಿರುವೆ, ಕಾಗೆ ? "

ಅದರ ಮಾತು ಕೇಳಿ, ಕಾಗೆ ಮೂರು ಗಾಹೆ ಹೇಳಿತು :

" ಶತ್ರುಗಳ ನಡುವೆ ವಾಸಿಸುತ್ತ, ಅವರ ಅನ್ನವನ್ನು ಹುಡುಕುತ್ತ, ಸದಾ ಎದೆ ತಲ್ಲಣಿಸುತ್ತಿರುವ ಕಾಗೆಗೆ ದೃಢತೆಯೆಲ್ಲಿಯದು ?

" ಪಾಪಕಾರ್ಯಗಳಲ್ಲಿ ವಕ್ರವಾಗಿ ನಡೆವ ಕಾಗೆಗಳಿಗೆ ಸದಾ ತಲ್ಲಣವೆ. ಸಿಕ್ಕುವ ಪಿಂಡ ಸಾಲದು. ಆದರಿಂದ ಬಡವಾಗಿದ್ದೇನೆ, ವರ್ತಕ.

"ಒರಟಾಗಿ ಹಸಿಯುಲ್ಲದ ಹುಲ್ಲು ಬೀಜಗಳನ್ನು ತಿನ್ನುತ್ತೀಯೆ. ಆದರೂ ಅದು ಹೇಗೆ ನೀನು ದಪ್ಪನಾಗಿದ್ದೀಯೆ, ವರ್ತಕ ?"

ಅದನ್ನು ಕೇಳಿ, ಬೋಧಿಸತ್ವನು ದಪ್ಪನಾಗಿರುವದಕ್ಕೆ ಕಾರಣವನ್ನು ತಿಳಿಸುತ್ತ ಎರಡು ಗಾಹೆ ಹೇಳಿದನು :

"ಅಲ್ಪ ಇಚ್ಛೆಯಿಂದ, ಅಲ್ಪ ಚಿಂತೆಯಿಂದ, ದೂರ ಹೋಗದಿರುವಿಕೆಯಿಂದ, ಸಿಕ್ಕಿದುದನ್ನು (ತೃಪ್ತಿಯಿಂದ) ತಿನ್ನುವದರಿಂದ ನಾನು ದಪ್ಪನಾಗಿದ್ದೇನೆ, ಕಾಗೆ.

"ಅಲ್ಪ ಇಚ್ಛೆಯಿದ್ದು, ಅಲ್ಪಚಿಂತೆಯಿದ್ದು, ಅಳತೆಯನ್ನು ತಿಳಿದವನು ಸುಖವಾಗಿರುವನು. ಅದು ಸುಲಭವಾಗಿ ಪಡೆಯುವಂತಹದು."

## ದರ್ಭಪುಷ್ಪ ಜಾತಕ (೪೦೦)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಒಂದು ನದೀತೀರದಲ್ಲಿ ವೃಕ್ಷದೇವತೆಯಾಗಿದ್ದನು. ಆಗ ಆ ನದೀತೀರದಲ್ಲಿ ಮಾಯಾವಿಯೆಂಬ ಸೃಗಾಲವು ತನ್ನ ಹೆಂಡತಿಯೊಡನೆ ಒಂದು ಕಡೆ ವಾಸವಾಗಿತ್ತು.

ಒಂದು ದಿನ ಆ ಸೃಗಾಲಿಯು "ಸ್ವಾಮಿ, ನನಗೆ ಬಯಕೆಯುಂಟಾಗಿದೆ. ಹೊಸ ಕೆಂಪುಮೀನಿನ ಮಾಂಸವನ್ನು ತಿನ್ನಲು ನನಗೆ ಆಸೆ" ಎಂದು ಸೃಗಾಲಕ್ಕೆ ಹೇಳಿತು. ಸೃಗಾಲವು "ನೀನೇನೂ ಚಿಂತಿಸಬೇಡ. ನಾನು ತರುತ್ತೇನೆ" ಎಂದು, ನದೀತೀರದಲ್ಲಿ ಚರಿಸುತ್ತ, ಕಾಲಿಗೆ ಬಳ್ಳಿಗಳನ್ನು ಬಿಗಿದುಕೊಂಡು ತೀರದಲ್ಲಿಯೇ ಹೋಯಿತು.

ಆ ಸಮಯದಲ್ಲಿ ಗಂಭೀರಚಾರಿ, ಅನುತೀರಚಾರಿ ಎಂಬ ಎರಡು ಉದ್ರಗಳು ಮೀನು ಹುಡುಕುತ್ತ ತೀರದಲ್ಲಿ ನಿಂತಿದ್ದುವು. ಅವುಗಳಲ್ಲಿ ಗಂಭೀರಚಾರಿಯು ಒಂದು ದೊಡ್ಡ ಕೆಂಪುಮೀನನ್ನು ಕಂಡು, ವೇಗವಾಗಿ ನೀರೊಳಕ್ಕೆ ಹೊಕ್ಕು, ಅದರ ಬಾಲವನ್ನು ಹಿಡಿಯಿತು. ಆದರೆ ಬಲಶಾಲಿಯಾದ ಮೀನು ಅದನ್ನೇ ಎಳೆದುಕೊಂಡು ಹೋಯಿತು. ಅದು "ಈ ದೊಡ್ಡ ಮೀನು ನಮಗಿಬ್ಬರಿಗೂ ಸಾಕಾಗುವುದು. ನನ್ನ ಸಹಾಯಕ್ಕೆ ಬಾ" ಎಂದು ಇನ್ನೊಂದನ್ನು ಕೂಗುತ್ತ

"ಭದ್ರ, ಅನುತೀರಚಾರಿ! ನನ್ನ ಸಹಾಯಕ್ಕೆ ಓಡಿ ಬಾ! ನಾನು ಹಿಡಿದ ಮೀನು ದೊಡ್ಡದು. ನನ್ನನ್ನು ಬಲವಾಗಿ ಎಳೆಯುತ್ತಿದೆ"

ಎಂದು ಮೊದಲನೆಯ ಗಾಹೆ ಹೇಳಿತು.

ಅದನ್ನು ಕೇಳಿ ಅನುತೀರಚಾರಿಯು

"ಭದ್ರ, ಗಂಭೀರಚಾರಿ! ಬಲವಾಗಿ ಬಿಗಿಯಾಗಿ ಹಿಡಿ. ಗರುಡನು ಹಾವನ್ನು ಹೇಗೋ ಹಾಗೆ ನಾನು ನಿನ್ನನ್ನು ಮೇಲೆತ್ತುವೆನು."

ಎಂದು ಎರಡನೆಯ ಗಾಹೆ ಹೇಳಿತು.

ಆಗ ಅವು ಎರಡೂ ಒಂದಾಗಿ, ಆ ಕೆಂಪುಮೀನನ್ನು ನೆಲದ ಮೇಲಿಟ್ಟುಕೊಂಡು "ನೀನು ಹಂಚು, ನೀನು ಹಂಚು" ಎಂದು ಜಗಳವಾಡುತ್ತ, ಹಂಚಲಾರದೆ ಕೆಳಗಿಟ್ಟು ಕುಳಿತವು.

ಆ ವೇಳೆಗೆ ಸೃಗಾಲವು ಅಲ್ಲಿಗೆ ಬಂತು. ಆ ಉದ್ರಗಳು ಅದನ್ನು ಕಂಡು ನಮಸ್ಕರಿಸಿ "ಅಯ್ಯಾ ದರ್ಭಪುಷ್ಪ! ನಾವು ಒಟ್ಟಾಗಿ ಈ ಮೀನು ಹಿಡಿದೆವು. ಇದನ್ನು ಹಂಚಲಾರದೆ ನಮ್ಮಲ್ಲಿ ವಿವಾದ ಹುಟ್ಟಿತು. ನೀನು ಸಮವಾಗಿ ಹಂಚಿಕೊಡು" ಎಂದು ಕೇಳಿ,

"ಕೇಳು, ದರ್ಭಪುಷ್ಪ! ನಮ್ಮಲ್ಲಿ ವಿವಾದ ಹುಟ್ಟಿತು. ನಮ್ಮ ಕಲಹ ವನ್ನು ಶಮನಮಾಡು. ನಮ್ಮ ವಿವಾದ ಶಾಂತವಾಗಲಿ"
ಎಂದು ಮೂರನೆಯ ಗಾಹೆಯನ್ನು ಹೇಳಿದವು.

ಅವುಗಳ ಮಾತು ಕೇಳಿ, ಸೃಗಾಲವು ತನ್ನ ಬಲವನ್ನು ಬೆಳಗುತ್ತ,

"ನಾನು ಹಿಂದೆ ಧರ್ಮದಿಂದ ಅನೇಕ ನ್ಯಾಯಗಳನ್ನು ತೀರಿಸಿದ್ದೇನೆ. ನಿಮ್ಮ ಕಲಹವನ್ನು ನಿಲ್ಲಿಸುವೆನಯ್ಯ. ನಿಮ್ಮ ವಿವಾದ ನಿಲ್ಲಲಿ"
ಎಂದು ಈ ಗಾಹೆಯನ್ನು ಹೇಳುತ್ತ ಹಂಚಿ,

"ಅನುತೀರಚಾರಿಗೆ ಬಾಲ, ಗಂಭೀರಚಾರಿಗೆ ತಲೆ; ಮಧ್ಯದ ಖಂಡವು ಧರ್ಮಸ್ಥನಿಗೆ"
ಎಂದು ಗಾಹೆ ಹೇಳಿತು.

ಹೀಗೆ ಆ ಮೀನನ್ನು ಹಂಚಿ, "ನೀವು ಜಗಳವಾಡದೆ ಬಾಲವನ್ನೂ ತಲೆಯನ್ನೂ ತಿನ್ನಿರಿ" ಎನ್ನುತ್ತ ಮಧ್ಯದ ಖಂಡವನ್ನು ಬಾಯಲ್ಲಿ ಕಚ್ಚಿ ಕೊಂಡು, ಅವು ನೋಡುತ್ತಿದ್ದಂತೆಯೇ ಓಡಿಹೋಯಿತು.

ಅವು ಸಾವಿರವನ್ನು ಸೋತಂತೆ ಕೆಟ್ಟಮುಖ ಮಾಡಿ ಕುಳಿತು,

"ಜಗಳವಿಲ್ಲದಿದ್ದಿದ್ದರೆ ನಮಗೆ ಬಹುಕಾಲ ಊಟವಾಗುತ್ತಿತ್ತು; ತಲೆ ಬಾಲಗಳಿಲ್ಲದ ಕೆಂಪುಮೀನನ್ನು ಸೃಗಾಲ ಕೊಂಡಿತು"
ಎಂದು ಆರನೆಯ ಗಾಹೆಯನ್ನು ಹೇಳಿದುವು.

ಸೃಗಾಲವು "ಈ ದಿನ ಹೆಂಡತಿಗೆ ಕೆಂಪುಮೀನು ತಿನ್ನಿಸುವೆನು" ಎಂದು ಸಮಾಧಾನದಿಂದ ಅದರ ಬಳಿ ಹೋಯಿತು. ಸೃಗಾಲಿಯು ಅದು ಬರುವುದನ್ನು ಕಂಡು ಸಂತೋಷಪಟ್ಟು,

"ರಾಜ್ಯ ಸಿಕ್ಕಿದ ಕ್ಷತ್ರಿಯರಾಜನು ಆನಂದಪಡುವಂತೆ, ಪತಿಯ ತುಂಬಿದ ಬಾಯನ್ನು ಕಂಡು ನಾನು ಆನಂದಪಡುವೆನು"
ಎಂದು ಈ ಗಾಹೆಯನ್ನು ಹೇಳಿ,

"ನೆಲದಲ್ಲಿ ನಿಂತವನು ನೀರಿನ ಮೀನನ್ನು ಹೇಗೆ ಹಿಡಿದೆ? ನಿನಗೆ ಇದು ಹೇಗೆ ಸಿಕ್ಕಿತು— ವಿವರಿಸಯ್ಯ"
ಎಂದು, ಪಡೆದ ಉಪಾಯವನ್ನು ಕೇಳಿ ಈ ಗಾಹೆ ಹೇಳಿತು.

ಸೃಗಾಲವು ತಾನು ಅದನ್ನು ಪಡೆದ ಉಪಾಯವನ್ನು ತಿಳಿಸುತ್ತ,

"ವಿವಾದದಿಂದ ನಾಶವಾಗುವರು; ವಿವಾದದಿಂದ ಹಣ ಹಾಳು. ವಿವಾದದಿಂದ ಉದ್ರಗಳು ಇದನ್ನು ಕಳೆದುಕೊಂಡವು. ಮಾಯಾವೀ! ಕೆಂಪು ಮೀನು ತಿನ್ನು!"

ಎಂದು ಇನ್ನೊಂದು ಗಾಹೆ ಹೇಳಿತು.

## ದೀಪಿ ಜಾತಕ (೪೨೬)

ಹಿಂದೆ, ಬೋಧಿಸತ್ವನು ಮಗಧರಾಷ್ಟ್ರದ ಒಂದಾನೊಂದು ಗ್ರಾಮದ ಮಹಾಭೋಗಕುಲದಲ್ಲಿ ಹುಟ್ಟಿ, ವಯಸ್ಸು ಬಂದಮೇಲೆ ಕಾಮಗಳನ್ನು ಬಿಟ್ಟು ಋಷಿಪ್ರವ್ರಜ್ಯವನ್ನು ಪರಿವ್ರಜಿಸಿ, ಧ್ಯಾನ ಅಭಿಜ್ಞಾನಗಳನ್ನು ಪಡೆದು, ಬಹುಕಾಲ ಹಿಮವಂತದಲ್ಲಿ ವಾಸಮಾಡಿ, ಉಪ್ಪು ಹುಳಿಗಳಿಗಾಗಿ ರಾಜಗೃಹವನ್ನು ಸೇರಿ, ಗಿರಿವ್ರಜದಲ್ಲಿ ಒಂದು ಕಡೆ ಪರ್ಣಶಾಲೆ ಮಾಡಿಕೊಂಡು ವಾಸಮಾಡಿದನು.

ಆಗ, ಆಡುಕಾಯುವವರು ಆಡುಗಳು ಇಲ್ಲಿ ಓಡಾಡಲೆಂದು ಗಿರಿವ್ರಜದಲ್ಲಿ ಹೊಗಿಸಿ ತಾವು ಆಟವಾಡುತ್ತಿದ್ದರು. ಅವರು ಒಂದು ದಿವಸ ಸಂಜೆ ಆಡುಗಳನ್ನು ಕೊಂಡು ಹೋಗುವಾಗ ಒಂದು ಹೆಣ್ಣಾಡು ದೂರ ಓಡಾಡುತ್ತ ಆಡುಗಳು ಹೋಗುವುದನ್ನು ಕಾಣದೆ ಹಿಂದುಳಿಯಿತು. ಅದು ಆಮೇಲೆ ಹೋಗುವುದನ್ನು ಒಂದು ಕಿರುಬವು ಕಂಡು 'ಇದನ್ನು ತಿನ್ನುವೆನು' ಎಂದು ಗಿರಿವ್ರಜದ ಬಾಗಿಲಿನಲ್ಲಿ ನಿಂತಿತು. ಆಡು ಕೂಡ ಅದನ್ನು ನೋಡಿ "ಇಂದು ನಾನು ಬದುಕುವಂತಿಲ್ಲ. ಏನಾದರೂ ಉಪಾಯದಿಂದ ಇದರೊಡನೆ ಮಧುರವಾಗಿ ಉಪಚಾರವಾಡಿ, ಇದರ ಹೃದಯವನ್ನು ಮೃದುವಾಗಿಸಿ, ಜೀವವನ್ನು ಕಾಪಾಡಿಕೊಳ್ಳುವೆನು" ಎಂದು ಚಿಂತಿಸಿ, ಅದರೊಡನೆ ಉಪಚಾರವಾಡುತ್ತ ಮೊದಲ ಗಾಹೆ ಹೇಳಿತು:

"ಕ್ಷೇಮವಾಗಿರುವೆಯು, ಮಾವ? ಸುಖವಾಗಿರುವೆಯು? ಅಮ್ಮ ನಿನ್ನ ಸುಖ ಕೇಳಿದಳು. ನಾನು ಕೂಡ ನಿನ್ನ ಸುಖ ಬಯಸುತ್ತೇನೆ."

ಅದನ್ನು ಕೇಳಿ ಕಿರುಬವು "ಈ ಧೂರ್ತೆ ನನ್ನನ್ನು ಮಾವನೆಂದು ಕರೆದು ಮೋಸಮಾಡಬಯಸುವುದು. ನನ್ನ ಒರಟುತನ ಇದಕ್ಕೆ ಗೊತ್ತಿಲ್ಲ" ಎಂದು ಚಿಂತಿಸಿ ಎರಡನೆಯ ಗಾಹೆ ಹೇಳಿತು:

"ಆಡಿನ ಮರಿ! ನೀನು ನನ್ನ ಬಾಲ ತುಳಿದು ನೋಯಿಸಿದೆ. ಈಗ ಮಾವನೆಂದು ಮಾತನಾಡಿಸಿ ಬಿಡಿಸಿಕೊಳ್ಳುವೆನೆಂದು ತಿಳಿದೆಯೇನು!"

ಅದನ್ನು ಕೇಳಿ "ಹಾಗೆ ಹೇಳಬೇಡ, ಮಾವ" ಎಂದು ಹೇಳಿ ಆಡು ಮೂರನೆಯ ಗಾಹೆ ಹೇಳಿತು:

"ನೀನು ಪೂರ್ವದ ಕಡೆ ಮುಖ ಮಾಡಿ ಕುಳಿತಿದ್ದೆ. ನಾನು ನಿನ್ನ ಎದುರಿಗೆ ಬಂದೆ. ನಿನ್ನ ಬಾಲ ಹಿಂದುಗಡೆ ಇದೆ. ನಾನು ಹೇಗೆ ತುಳಿದೆ?"

ಆಗ ಅದು ಅದನ್ನು ಕುರಿತು "ಏನೆಂದೆ, ಆಡಿನಮರಿ? ನನ್ನ ಬಾಲವು ಇಲ್ಲದ ಸ್ಥಳವಿಲ್ಲ" ಎಂದು ಹೇಳಿ ನಾಲ್ಕನೆಯ ಗಾಹೆ ಹೇಳಿತು:

"ಸಮುದ್ರಗಳೂ ಪರ್ವತಗಳೂ ಕೂಡಿದ ನಾಲ್ಕು ದ್ವೀಪಗಳವರೆಗೂ ನನ್ನ ಬಾಲವಿದೆ. ನೀನು ಹೇಗೆ ಅದನ್ನು ತುಳಿಯದೆ ಬಿಟ್ಟೆಯೆ?"

ಆಡಿನಮರಿ ಅದನ್ನು ಕೇಳಿ "ಈ ಪಾಪಿ ಮಧುರವಾದ ಮಾತಿಗೆ ಬಗ್ಗುವುದಿಲ್ಲ. ಪ್ರತಿಶತ್ರುವಾಗಿಯೇ ಮಾತನಾಡುವೆನು" ಎಂದು ಐದನೆಯ ಗಾಹೆ ಹೇಳಿತು:

"ದುಷ್ಟನ ಬಾಲ ದೀರ್ಘವಾದುದೆಂದು ಮೊದಲೇ ತಾಯಿತಂದೆಯರೂ ಅಣ್ಣತಮ್ಮಂದಿರೂ ನನಗೆ ಹೇಳಿದ್ದರು. ನಾನು ಆಕಾಶದಲ್ಲಿ ಬಂದೆ."

ಆಗ ಅದು "ನೀನು ಆಕಾಶದಲ್ಲಿ ಬಂದುದು ನನಗೆ ಗೊತ್ತು. ಹಾಗೆ ಬರುವಾಗ ನನ್ನ ಆಹಾರವನ್ನು ಹಾಳುಮಾಡಿ ಬಂದೆ" ಎಂದು ಹೇಳಿ, ಆರನೆಯ ಗಾಹೆ ಹೇಳಿತು:

"ಆಡಿನ ಮರಿ, ನೀನು ಆಕಾಶದಲ್ಲಿ ಬರುವುದನ್ನು ಕಂಡು ಜಿಂಕೆಗಳ ಗುಂಪು ಓಡಿತು. ನಿನ್ನಿಂದ ನನ್ನ ಊಟ ನಾಶವಾಯ್ತು."

ಅದನ್ನು ಕೇಳಿ, ಆಡುಮರಿ ಮರಣಭಯದಿಂದ ಬೆದರಿ, ಬೇರೆ ಕಾರಣ ತರಲಾರದೆ, "ಮಾವ, ಇಂತಹ ಕರ್ಕಶವಾದ ಕೆಲಸ ಮಾಡ

ಬೇಡ. ನನಗೆ ಜೀವ ಕೊಡು" ಎಂದು ಗೋಳಾಡಿತು. ಕಿರುಬ, ಅದು ಅಳುತ್ತಿದ್ದಂತೆಯೇ ಅದರ ಹೆಗಲು ಹಿಡಿದು ಅದನ್ನು ಕೊಂದು ತಿಂದಿತು.

ತಾಪಸನು ಅವುಗಳ ಕಾರ್ಯವೆಲ್ಲವನ್ನೂ ಕಂಡನು.

## ಪೂತಿಮಾಂಸ ಜಾತಕ (೪೩೭)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರುವಾಗ, ಹಿಮವಂತದ ಪಕ್ಕದ ದಟ್ಟವಾದ ಕಾಡಿನ ಪರ್ವತಗುಹೆಯಲ್ಲಿ ಅನೇಕ ನೂರು ಕಾಡುಕುರಿಗಳು ವಾಸಿಸುತ್ತಿದ್ದವು. ಅವುಗಳ ವಾಸಸ್ಥಾನಕ್ಕೆ ಸ್ವಲ್ಪ ದೂರದಲ್ಲಿ, ಒಂದು ಗುಹೆಯಲ್ಲಿ, ಪೂತಿಮಾಂಸನೆಂಬ ಸೃಗಾಲವು ವೇಣಿಕೆಯೆಂಬ ತನ್ನ ಹೆಂಡತಿಯೊಡನೆ ವಾಸಿಸುತ್ತಿತ್ತು. ಅದು ಒಂದು ದಿನ ಹೆಂಡತಿಯೊಡನೆ ತಿರುಗುತ್ತ ಆ ಕಾಡುಕುರಿಗಳನ್ನು ಕಂಡು "ಏನಾದರೂ ಉಪಾಯದಿಂದ ಇವುಗಳ ಮಾಂಸವನ್ನು ತಿನ್ನಬೇಕಲ್ಲ!" ಎಂದು ಚಿಂತಿಸಿ, ಉಪಾಯದಿಂದ ಒಂದೊಂದು ಕಾಡುಕುರಿಯನ್ನು ಕೊಂದಿತು. ಅವು ಎರಡೂ ಕಾಡುಕುರಿಯ ಮಾಂಸವನ್ನು ತಿನ್ನುತ್ತ ಬಲವಾದವು, ಮೈ ತುಂಬಿಕೊಂಡವು. ಅನುಕ್ರಮವಾಗಿ ಕಾಡುಕುರಿಗಳು ನಾಶವಾಗುತ್ತ ಬಂದವು.

ಅವುಗಳಲ್ಲಿ ಮೇಳಮಾತೆಯೆಂಬ ಹೆಣ್ಣುಕುರಿ ಬುದ್ಧಿವಂತೆ ಯಾಗಿತ್ತು. ಉಪಾಯಕುಶಲಿಯಾದ ಸೃಗಾಲವು ಅದನ್ನು ಕೊಲ್ಲಲಾರದೆ, ಒಂದು ದಿನ ಹೆಂಡತಿಯೊಡನೆ ಮಂತ್ರಣಮಾಡುತ್ತ, "ಭದ್ರೆ, ಕಾಡುಕುರಿಗಳು ನಾಶವಾದವು. ಈ ಹೆಣ್ಣುಕುರಿಯನ್ನು ಏನಾದರೂ ಉಪಾಯದಿಂದ ತಿನ್ನಬೇಕಲ್ಲ! ಇದು ಅದಕ್ಕೆ ಉಪಾಯ: ನೀನು ಒಂಟಿಯಾಗಿ ಹೋಗಿ ಅದರೊಡನೆ ಸ್ನೇಹವಾಗು. ನೀನು ಅದರೊಡನೆ ವಿಶ್ವಾಸ ವುಂಟುಮಾಡಿಕೊಂಡಾಗ ನಾನು ಸತ್ತಂತೆ ನಟಿಸಿ ಮಲಗುವೆನು. ಆಗ ನೀನು ಅದರ ಬಳಿ ಹೋಗಿ, 'ಅಮ್ಮ, ನನ್ನ ಸ್ವಾಮಿ ಸತ್ತನು. ನಾನು

ಅನಾಥೆ. ನಿನ್ನ ಹೊರತು ನನಗೆ ಯಾರೂ ಜ್ಞಾತಿಗಳಿಲ್ಲ. ಬಾ, ಅತ್ತು ಗೋಳಾಡುತ್ತ ಅದರ ಶರೀರಕೃತ್ಯಗಳನ್ನು ಮಾಡೋಣ' ಎಂದು ಹೇಳಿ, ಅದನ್ನು ಒಡಗೊಂಡು ಬಂದುಬಿಡು. ಆಗ ನಾನು ಅದರ ಮೇಲೆ ಬಿದ್ದು ಕತ್ತನ್ನು ಕಚ್ಚಿ ಸಾಯಿಸುವೆನು" ಎಂದಿತು.

ಅದು ಒಳ್ಳೆಯದೆಂದು ಒಪ್ಪಿ ಅದರೊಡನೆ ಸಖ್ಯಮಾಡಿ ವಿಶ್ವಾಸ ಹುಟ್ಟಿಸುವುದಕ್ಕಾಗಿ ಆ ಕುರಿಯೊಡನೆ ಹಾಗೆಯೆ ಹೇಳಿತು. ಕುರಿಯು "ಲೇ, ನಿನ್ನ ಸ್ವಾಮಿ ನನ್ನ ಜ್ಞಾತಿಗಳನ್ನೆಲ್ಲ ತಿಂದಿತು. ಹೆದರುವೆನಮ್ಮ, ಬರಲಾರೆ" ಎಂದಿತು. "ಲೇ, ಹೆದರಬೇಡ. ಸತ್ತವನು ಏನು ಮಾಡುವನು?" ಎಂದಿತು. "ನಿನ್ನ ಗಂಡ ಕ್ರೂರಮನಸ್ಸಿನವನು. ಹೆದರಿಕೆಯಾಗುವುದು" ಎಂದು ಹೇಳಿದರೂ ಅದು ಪುನಃ ಪುನಃ ಬೇಡಲು, "ನಿಜವಾಗಿ ಸತ್ತಿರಬೇಕು" ಎಂದು ಯೋಚಿಸಿ ಕುರಿಯು ಅದರೊಡನೆ ತೆರಳಿತು. ಹೋಗುತ್ತಿರುವಾಗ ಪುನಃ "ಏನಾಗುವುದೋ ಯಾರಿಗೆ ಗೊತ್ತು" ಎಂದು ಆಶಂಕೆಯಿಂದ ಸೃಗಾಲಿಯನ್ನು ಮುಂದುಮಾಡಿಕೊಂಡು, ಸೃಗಾಲವು ಹಿಡಿಯುವುದೋ ಎಂಬಂತೆ ಹೋಗುತ್ತಿತ್ತು.

ಸೃಗಾಲವು ಅವುಗಳ ಹೆಜ್ಜೆಯ ಸದ್ದನ್ನು ಕೇಳಿ, "ಬಂತು ಕುರಿ!" ಎಂದು ತಲೆಯನ್ನು ಎತ್ತಿ ಕಣ್ಣುಗಳನ್ನು ಹೊರಳಿಸಿ ನೋಡಿತು. ಅದು ಹಾಗೆ ಮಾಡುವುದನ್ನು ಕುರಿ ಕಂಡು, "ಈ ಪಾಪಿ ನನ್ನನ್ನು ವಂಚಿಸಿ ಕೊಲ್ಲಬಯಸಿ ಸತ್ತಂತೆ ಕಾಣಿಸಿ ಮಲಗಿದೆ" ಎಂದು ಹಿಂದಿರುಗಿ ಓಡುವುದನ್ನು ಕಂಡು ಸೃಗಾಲಿಯು "ಏಕೆ ಓಡುವೆ?" ಎಂದೆನ್ನಲು, ಆ ಕಾರಣವನ್ನು ಹೇಳುತ್ತ ಮೊದಲ ಗಾಹೆ ಹೇಳಿತು:

"ಪೂತಿಮಾಂಸನ ನೋಡುವಿಕೆಯು ನನಗೆ ರುಚಿಸುವುದಿಲ್ಲ. ಇಂತಹ ಸ್ನೇಹಿತರಿಂದ ದೂರವಾಗಿಬಿಡಬೇಕು."

ಅದು ಹೀಗೆಂದು ಹೇಳಿ ಹಿಂದಿರುಗಿ ತನ್ನ ವಾಸಸ್ಥಾನಕ್ಕೆ ಹೋಯಿತು. ಸೃಗಾಲಿಯು ಅದನ್ನು ಹಿಂದಿರುಗಿಸಲಾರದೆ, ಅದರ ಮೇಲೆ ಕೋಪಗೊಂಡು, ತನ್ನ ಸ್ವಾಮಿಯ ಸಮೀಪಕ್ಕೆ ಹೋಗಿ ಗೋಳಾಡುತ್ತ

ಕುಳಿತಿತು. ಆಗ ಸೃಗಾಲವು ಅದನ್ನು ಹಂಗಿಸುತ್ತ ಎರಡನೆಯ ಗಾಹೆ ಹೇಳಿತು :

" ಈ ವೇಣಿಗೆ ಹುಚ್ಚು. ಪತಿಯೊಡನೆ ಸಖಿಯನ್ನು ವರ್ಣಿಸಿದಳು. ಮೇಳವಾತೆ ಬಂದು ಹಿಂದಿರುಗಿದರೆ, ಗೋಳಾಡುವಳು. "

ಅದನ್ನು ಕೇಳಿ ಸೃಗಾಲಿ ಮೂರನೆಯ ಗಾಹೆ ಹೇಳಿತು :

" ಸತ್ತಂತೆ ಮಾಡಿ ಅಕಾಲದಲ್ಲಿ ಕಣ್ಣುಬಿಟ್ಟು ನೋಡಿದ ನೀನೆ ಹುಚ್ಚ, ಬುದ್ಧಿಕೆಟ್ಟವನು, ವಿಚಕ್ಷಣತೆಯಿಲ್ಲದವನು."

" ಪಂಡಿತನು ಅಕಾಲದಲ್ಲಿ ಕಣ್ಣುಬಿಡದೆ ಕಾಲದಲ್ಲಿ ಕಣ್ಣುಬಿಡುವನು. ಅಕಾಲದಲ್ಲಿ ಕಣ್ಣುಬಿಡುವವನು ಪೂತಿಮಾಂಸನಂತೆ ಗೋಳಾಡುವನು."

ಇದು ಅಭಿಸಂಬುದ್ಧಗಾಹೆ.

ಸೃಗಾಲಿ ವೇಣಿಯು ಪೂತಿಮಾಂಸವನ್ನು ಸಂತೈಸಿ, " ಸ್ವಾಮಿ, ಚಿಂತಿಸಬೇಡ. ಅದನ್ನು ನಾನು ಪುನಃ ಉಪಾಯದಿಂದ ಕರೆತರುವೆನು. ಅದು ಬಂದ ವೇಳೆಯಲ್ಲಿ ನೀನು ಅಪ್ರಮತ್ತನಾಗಿ ಅದನ್ನು ಹಿಡಿಯು ವವನಾಗು " ಎಂದು, ಅದರ ಬಳಿ ಹೋಗಿ " ಲೇ, ನೀನು ಬಂದುದು ನಮಗೆ ಒಳ್ಳೆಯದಕ್ಕೇ ಆಯಿತು. ನೀನು ಬಂದ ವೇಳೆಯಲ್ಲಿಯೆ ನನ್ನ ಸ್ವಾಮಿಗೆ ಸ್ಮೃತಿ ಬಂತು. ಈಗ ಬದುಕಿದನು. ಬಾ, ಅವನೊಡನೆ ಉಪಚಾರದ ಮಾತನಾಡು" ಎಂದು ಹೇಳಿ ಐದನೆಯ ಗಾಹೆ ಹೇಳಿತು :

" ಲೇ, ನನಗೆ ಪ್ರಿಯಳಾಗು. ಪ್ರಸನ್ನಳಾಗು. ನನ್ನ ಸ್ವಾಮಿ ಸ್ವಸ್ಥ ವಾದನು. ಪ್ರಿಯವನ್ನು ಕೇಳು, ಬಾ."

ಕುರಿಯು " ಈ ಪಾಪಿ ನನ್ನನ್ನು ವಂಚಿಸಬಯಸುವುದು. ಇದ ರೊಡನೆ ಶತ್ರುವಿನಂತೆ ಆಚರಿಸುವುದು ಯೋಗ್ಯವಲ್ಲ. ಉಪಾಯ ವಾಗಿಯೇ ಇದನ್ನು ವಂಚಿಸುವೆನು " ಎಂದು ಚಿಂತಿಸಿ ಆರನೆಯ ಗಾಹೆ ಹೇಳಿತು :

" ನಿನಗೆ ಪ್ರಿಯಳಾಗುವೆನು. ನಾನು ಪ್ರಸನ್ನಳಾಗುವೆನು. ದೊಡ್ಡ ಪರಿವಾರದೊಡನೆ ಬರುವೆನು. ನಮಗೆ ಭೋಜನ ಮಾಡಿಸು"

ಆಗ ಸೃಗಾಲಿ ಅದರ ಪರಿವಾರವನ್ನು ಕುರಿತು ಪ್ರಶ್ನಿಸುತ್ತ,

"ನಾನು ಭೋಜನ ಮಾಡಿಸುವ ನಿನ್ನ ಪರಿವಾರವೆಂತಹದು? ಅವರೆಲ್ಲರ ಹೆಸರೇನು? ಕೇಳುವೆನು, ಹೇಳು."

ಎಂದು ಏಳನೆಯ ಗಾಹೆ ಹೇಳಿತು.

"ಮೂಲಿಕ, ಚತುರಕ್ಷ, ಪಿಂಗಿಕ, ಜಂಬುಕ ಎಂಬವು ನನ್ನ ಪರಿವಾರ. ಅವುಗಳಿಗೆ ಭೋಜನ ಮಾಡಿಸು"

ಎಂದು ಅದು ಎಂಟನೆಯ ಗಾಹೆ ಹೇಳುತ್ತ, "ಅಲ್ಲಿ, ಒಂದೊಂದಕ್ಕೂ ಐನೂರು ನಾಯಿಗಳ ಪರಿವಾರ. ಹೀಗೆ ಎರಡು ಸಾವಿರ ನಾಯಿಗಳ ಪರಿವಾರದೊಡನೆ ಬರುವೆನು" ಎಂದು ಹೇಳಿ, "ಅವುಗಳಿಗೆ ಊಟ ಸಿಕ್ಕದಿದ್ದರೆ ನಿಮ್ಮಿಬ್ಬರನ್ನೂ ಕೊಂದು ತಿಂದುಬಿಡುವವು" ಎಂದಿತು.

ಅದನ್ನು ಕೇಳಿ ಸೃಗಾಲಿಯು ಭಯಗೊಂಡು "ಇದು ಅಲ್ಲಿಗೆ ಬರುವುದು ಸಾಕು. ಉಪಾಯವಾಗಿ ಇದು ಬಾರದಂತೆ ಮಾಡುವೆನು" ಎಂದು ಚಿಂತಿಸಿ, ಒಂಬತ್ತನೆಯ ಗಾಹೆ ಹೇಳಿತು:

"ನೀನು ಮನೆಯಿಂದ ಹೊರಗೆ ಬಂದರೆ, ನಿನ್ನ ಮನೆಯಲ್ಲಿರುವ ವಸ್ತುಗಳು ನಾಶವಾಗುವುವು. ನಿನ್ನ ಆರೋಗ್ಯವನ್ನು ನಾನು ತಿಳಿಸುತ್ತೇನೆ. ಇಲ್ಲೇ ಇರು, ಬರಬೇಡ."

ಹೀಗೆ ಹೇಳಿ, ಅದು ಮರಣಭಯದಿಂದ ಹೆದರಿ, ವೇಗದಿಂದ ಸ್ವಾಮಿಯ ಬಳಿ ಹೋಗಿ, ಅದನ್ನೂ ಒಡಗೊಂಡು ಓಡಿತು. ಅವು ಪುನಃ ಆ ಸ್ಥಳಕ್ಕೆ ಬರಲಿಲ್ಲ.

# ಇನ್ನು ಹತ್ತು ಕತೆ

ಧರ್ಮವನ್ನು ಜನಸಾಮಾನ್ಯಕ್ಕೆ ತಿಳಿಸಿಕೊಡಲು ನೆರವಾದ "ಜಾತಕ ಕಥೆ"ಗಳಿಂದ ಇನ್ನು ಹತ್ತು ಕತೆಗಳನ್ನು ಆಯ್ದು ಕೆಳಗೆ ಕೊಟ್ಟಿದೆ.

ಮಾನವನ ಯಾವೆಲ್ಲ ಗುಣ ರೂಪ ಸಂಪತ್ತುಗಳನ್ನು ಮೀರಿ ನಿಂತದ್ದು ಶೀಲ, ನಡತೆ. ಧರ್ಮದಲ್ಲಿ ಶೀಲದ ಅವಶ್ಯಕತೆಯನ್ನೂ ಆಧಿಕ್ಯ ವನ್ನೂ ಇಲ್ಲಿಯ ಎರಡು ಜಾತಕ ತಿಳಿಸುವುದು. ಸಹವಾಸದ ಫಲಾಫಲ ಗಳನ್ನು ವಿವರಿಸುವುದು ಇನ್ನೊಂದು. ಹೊಸದರ ಮೋಹದಿಂದ ಹಳೆಯ ಅವಲಂಬನಗಳನ್ನು ತೊರೆದರೆ ಆಗುವ ಘೋರ, ಇನ್ನೊಂದರಲ್ಲಿ. ಮಾತು ಒಳ್ಳೆಯದಾಗಿದ್ದರೆ ಮಿಕ್ಕೆಲ್ಲವೂ ಒಳ್ಳೆಯದಾಗುವುದೆಂದು ಇನ್ನೊಂದರ ಸಾರಾಂಶ.

'ಜಾತಕ ಕಥೆ'ಗಳನ್ನು ಬಳಸುವ ಬೌದ್ಧರ ಗುರುವಾದ ಭಗವಂತ ಬುದ್ಧನು "ಧರ್ಮರಾಜ"ನೆನಿಸಿದವನು. ಈ "ಧರ್ಮರಾಜ"ನ "ಧರ್ಮ ಸೇನಾಪತಿ"ಯೆನಿಸಿದ ಸಾರಿಪುತ್ರನು "ನಾಭಿನಂದಾಮಿ ಮರಣಂ, ನಾಭಿ ನಂದಾಮಿ ಜೀವಿತಂ" ಎನ್ನುತ್ತಿದ್ದನು. "ಸಾವಿಗೆ ನಾನು ಆನಂದಿಸುವು ದಿಲ್ಲ, ಬದುಕಿಗೆ ನಾನು ಆನಂದಿಸುವುದಿಲ್ಲ" ಎಂಬುದು ಗುರು ಕಲಿಸಿ ಕೊಟ್ಟ ಆ ಮಾತಿನ ಅರ್ಥ. ಸಾವು ಸರ್ವರಿಗೂ ಸಿದ್ಧವಾದುದೆಂಬ ಪರ ಮಾರ್ಥವನ್ನು ತಿಳಿದು ಸಮಚಿತ್ತತೆಯನ್ನು ಕಾಯ್ದುಕೊಳ್ಳಬೇಕೆಂದು ಬೋಧಿಸುವ ಎರಡು ಜಾತಕಗಳೂ ಇಲ್ಲಿವೆ.

ದಯೆಯೇ ಧರ್ಮದ ಮೂಲ. ಬೌದ್ಧರ 'ಅಹಿಂಸೆ'ಯು ಕೇವಲ ಹಿಂಸೆಮಾಡದಿರುವದರಲ್ಲಿಯೇ ಮುಗಿಯುವುದಿಲ್ಲ; 'ಹಿಂಸೆ' ಎಂಬುದಕ್ಕೆ ಪೂರ್ಣ ವಿಪರೀತವಾದ 'ಹಿತ'ವನ್ನು ಮಾಡಬೇಕೆಂಬುದೇ 'ಅಹಿಂಸೆ'. ಈ ಹಿತವನ್ನು ಅವರು, ದಯೆ, ಮೈತ್ರಿ, ಅನುಕಂಪ, ಅಕ್ರೋಧ ಮುಂತಾಗಿ ಕರೆಯುವರು. ಇದೇ ಪರಮವೆಂಬುದನ್ನು 'ರಾಜೋವಾದ ಜಾತಕ'

ವರ್ಣಿಸುವುದು. ಈ ತರದ ಮೈತ್ರಿಗೆ ಮೂಲವಾದ 'ಕ್ಷಮೆ'ಯೆಂಬ ಮನೋಗುಣವನ್ನು 'ಕ್ಷಾಂತಿವಾದಿ ಜಾತಕ'ದಲ್ಲಿ ಕಾಣಬಹುದು.

ಉಳಿದುದು ಇನ್ನೊಂದು ಜಾತಕ, ಕಡೆಯದು. ಬುದ್ಧನು ತನ್ನ ಧರ್ಮವನ್ನು ಸನ್ಯಾಸಿಗಳಾಗುವವರಿಗೆ ಮಾತ್ರ ತಿಳಿಸಿದುದಲ್ಲ; ಲೋಕದ 'ಬಹು ಜನ'ರಿಗಾಗಿ, ಸಾಮಾನ್ಯರಿಗಾಗಿ, ಮನೆ ಮಠ ಹೆಂಡಿರು ಮಕ್ಕಳು ಎಂದುಕೊಂಡಿರುವವರಿಗಾಗಿ ಕೂಡ. ಇಂತಹ ಬೋಧೆಗಳಲ್ಲಿ ಒಂದಾದ ಕಡೆಯ ಜಾತಕವು ತಾಯ್ತನದ ಹೆಚ್ಚಳವನ್ನು ಮನಗಾಣಿಸುವುದು.

## ರಾಜೋವಾದ ಜಾತಕ (೧೫೧)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ಅವನ ಅಗ್ರಮಹಿಷಿಯ ಹೊಟ್ಟೆಯಲ್ಲಿ ಜನ್ಮತಳೆದು, ಗರ್ಭಪರಿಹಾರಗಳನ್ನು ಪಡೆದು, ಸ್ವಸ್ತವಾಗಿ ತಾಯ ಹೊಟ್ಟೆಯಿಂದ ಹೊರಬಂದನು. ಹೆಸರಿಡುವ ದಿವಸ ಅವನಿಗೆ ಬ್ರಹ್ಮದತ್ತಕುಮಾರನೆಂದೇ ಹೆಸರಿಟ್ಟರು. ಅವನು ಕ್ರಮವಾಗಿ ವಯಸ್ಸು ಪಡೆದು, ಹದಿನಾರನೆಯ ವಯಸ್ಸಿನಲ್ಲಿ ತಕ್ಷಶಿಲೆಗೆ ಹೋಗಿ ಸರ್ವಶಿಲ್ಪಗಳಲ್ಲಿ ಪಾಂಡಿತ್ಯ ಪಡೆದು, ತಂದೆ ಸತ್ತನಂತರ ರಾಜ್ಯದಲ್ಲಿ ನೆಲಸಿ, ಧರ್ಮದಿಂದಲೂ ಸಮತೆಯಿಂದಲೂ ರಾಜ್ಯವಾಳುತ್ತಿದ್ದನು. ತನ್ನ ಇಚ್ಛೆಗೆ ಒಳಗಾಗದೆ ತೀರ್ಮಾನ ಕೊಡುತ್ತಿದ್ದನು. ಅವನು ಹೀಗೆ ಧರ್ಮದಿಂದ ರಾಜ್ಯವಾಳುತ್ತಿರಲು ಅಮಾತ್ಯರು ಕೂಡ ಧರ್ಮದಿಂದಲೇ ವ್ಯವಹಾರಗಳನ್ನು ತೀರಿಸುತ್ತಿದ್ದರು. ಧರ್ಮದಿಂದ ವ್ಯವಹಾರಗಳನ್ನು ತೀರ್ಮಾನಿಸುತ್ತಿರಲು ಸುಳ್ಳುವ್ಯವಹಾರ ಮಾಡುವವರೇ ಇಲ್ಲವಾದರು. ವ್ಯವಹಾರಕ್ಕಾಗಿ ಬರುವವರು ಇಲ್ಲದ್ದರಿಂದ ರಾಜಾಂಗಣದಲ್ಲಿ ಸದ್ದಡಗಿತು. ಅಮಾತ್ಯರು ಹಗಲೆಲ್ಲ ತೀರ್ಪಿನ ಸ್ಥಳದಲ್ಲಿ ಕುಳಿತು ತೀರ್ಪಿಗೆ ಬರುವವರು ಯಾರನ್ನೂ ಕಾಣದೆ ಹೋಗುವರು. ನ್ಯಾಯಸ್ಥಾನವು ಬಟ್ಟಬರಿಯದಾಯಿತು.

ಬೋಧಿಸತ್ವನು "ನಾನು ಧರ್ಮದಿಂದ ರಾಜ್ಯವಾಳುತ್ತಿರಲು ತೀರ್ಪಿಗಾಗಿ ಬರುವವರಿಲ್ಲ, ಸದ್ದು ಅಡಗಿತು. ನ್ಯಾಯಸ್ಥಾನವು ಬಟ್ಟಬರಿಯದಾಯಿತು. ಈಗ ನನ್ನಲ್ಲಿರುವ ಅಗುಣಗಳನ್ನು ಹುಡುಕಬೇಕಲ್ಲ! 'ಇದು ನನ್ನ ಅಗುಣ' ಎಂದು ತಿಳಿದು, ಅದನ್ನು ಬಿಟ್ಟು ಗುಣಗಳಲ್ಲಿಯೇ ವರ್ತಿಸುವೆನು" ಎಂದು ಚಿಂತಿಸಿದನು. ಅಂದಿನಿಂದ "ನನ್ನ ಅಗುಣಗಳನ್ನು ಹೇಳುವವನು ಯಾರಾದರೂ ಉಂಟೆ?" ಎಂದು ಅರಮನೆಯ ಒಳಗೆ ಸೇರಿದವರಲ್ಲಿ ಸುತ್ತಿ, ಅಗುಣ ಹೇಳುವವರಾರನ್ನೂ ಒಳಗೆ ಕಾಣದೆ, ತನ್ನ ಗುಣಕಥನವನ್ನೇ ಕೇಳಿ, "ಇವರು ನನ್ನ ಭಯದಿಂದ ಅಗುಣವನ್ನು ಹೇಳದೆ ಗುಣವನ್ನೇ ಹೇಳುವರು" ಎಂದು ಅರಮನೆಯ ಹೊರಗೆ ಸೇರಿದವರಲ್ಲಿ ಸುತ್ತಿ, ಅಲ್ಲಿಯೂ ಕಾಣದೆ, ಒಳನಗರವನ್ನು ಸುತ್ತಿದನು; ನಗರದ ಹೊರಗೆ ನಾಲ್ಕು ದಿಕ್ಕಿನ ಬಾಗಿಲ ಬಳಿಯ ಗ್ರಾಮಗಳಲ್ಲಿ ಸುತ್ತಿದನು. ಅಲ್ಲಿಯೂ ಅಗುಣವಾದಿ ಯಾವನನ್ನೂ ಕಾಣದೆ, ತನ್ನ ಗುಣಕಥನವನ್ನೇ ಕೇಳಿ, "ಜನಪದವನ್ನು ತಿರುಗುವೆನು" ಎಂದು ಅಮಾತ್ಯರಿಗೆ ರಾಜ್ಯವನ್ನು ಒಪ್ಪಿಸಿ ರಥವನ್ನು ಏರಿ ಸಾರಥಿಯನ್ನು ಮಾತ್ರ ಒಡಗೊಂಡು ಅಜ್ಞಾತವೇಷದಿಂದ ನಗರದಿಂದ ಹೊರಟು ಜನಪದವನ್ನು ಸುತ್ತುತ್ತ ಗಡಿನಾಡಿಗೂ ಹೋಗಿ, ಅಗುಣವಾದಿ ಯಾರನ್ನೂ ಕಾಣದೆ, ಗುಣಕಥನವನ್ನೇ ಕೇಳಿ, ಗಡಿನಾಡಿನಿಂದ ಮಹಾಮಾರ್ಗದಲ್ಲಿ ನಗರಾಭಿಮುಖವಾಗಿಯೇ ತಿರುಗಿದನು.

ಆ ಕಾಲದಲ್ಲಿ ಮಲ್ಲಿಕನೆಂಬ ಕೋಸಲರಾಜನು ಕೂಡ ಧರ್ಮದಿಂದ ರಾಜ್ಯವಾಳುತ್ತ, ಅಗುಣವನ್ನು ಹುಡುಕುವವನಾಗಿ, ಒಳಗೆ ಸೇರಿದವರು ಮೊದಲಾದವರಲ್ಲಿ ಅಗುಣವಾದಿಯನ್ನು ಕಾಣದೆ, ತನ್ನ ಗುಣಕಥನವನ್ನೇ ಕೇಳಿ, ಜನಪದವನ್ನು ಸುತ್ತುತ್ತ ಆ ಪ್ರದೇಶಕ್ಕೆ ಬಂದನು.

ಅವರಿಬ್ಬರೂ ಒಂದು ತಗ್ಗಾದ ಶಕಟಮಾರ್ಗದಲ್ಲಿ ಎದುರಾದರು. ರಥವನ್ನು ದಾಟಿಸುವುದಕ್ಕೆ ಅಲ್ಲಿ ಸ್ಥಳವಿರಲಿಲ್ಲ.

ಆಗ ಮಲ್ಲಿಕರಾಜನ ಸಾರಥಿಯು ವಾರಣಾಸಿರಾಜನ ಸಾರಥಿಯನ್ನು ಕುರಿತು "ನಿನ್ನ ರಥವನ್ನು ಆಚೆ ತೆಗೆ" ಎಂದನು. ಅವನು ಕೂಡ "ಹೇ ಸಾರಥಿ, ನಿನ್ನ ರಥವನ್ನು ಆಚೆ ತೆಗೆ. ಈ ರಥದಲ್ಲಿ ವಾರಣಾಸಿರಾಜ್ಯದ ಸ್ವಾಮಿಯಾದ ಬ್ರಹ್ಮದತ್ತ ಮಹಾರಾಜನು ಕುಳಿತಿರುವನು" ಎಂದನು. ಇನ್ನೊಬ್ಬನು ಕೂಡ "ಹೇ ಸಾರಥಿ, ಈ ರಥದಲ್ಲಿ ಕೋಸಲರಾಜ್ಯದ ಸ್ವಾಮಿಯಾದ ಮಲ್ಲಿಕ ಮಹಾರಾಜನು ಕುಳಿತಿರುವನು. ನಿನ್ನ ರಥವನ್ನು ಆಚೆ ತೆಗೆದು, ನಮ್ಮ ರಾಜನ ರಥಕ್ಕೆ ಅವಕಾಶ ಕೊಡು" ಎಂದನು. ವಾರಣಾಸಿರಾಜನ ಸಾರಥಿಯು "ಇವನು ಕೂಡ ರಾಜನೇ. ಏನು ಮಾಡತಕ್ಕದು?" ಎಂದು ಚಿಂತಿಸಿ, "ಇದಕ್ಕೆ ಉಪಾಯವುಂಟು: ವಯಸ್ಸನ್ನು ಕೇಳಿ, ಚಿಕ್ಕವನ ರಥವನ್ನು ತೆಗೆಸಿ, ವಯಸ್ಸಾದವನಿಗೆ ಅವಕಾಶ ಕೊಡಿಸುವೆನು" ಎಂದು ನಿಶ್ಚಯಿಸಿ, ಆ ಸಾರಥಿಯಿಂದ ಕೋಸಲರಾಜನ ವಯಸ್ಸು ಕೇಳಿ, ಇಬ್ಬರಿಗೂ ಒಂದೇ ವಯಸ್ಸೆಂಬುದನ್ನು ತಿಳಿದು, ರಾಜ್ಯದ ಪರಿಮಾಣ, ಬಲ, ಧನ, ಯಶಸ್ಸು, ಜಾತಿ, ಗೋತ್ರ, ಕುಲ, ಪ್ರದೇಶಗಳೇನೆಂದು ಎಲ್ಲವನ್ನೂ ಪ್ರಶ್ನಿಸಿ, "ಇಬ್ಬರೂ ೩೦೦ ಯೋಜನಗಳ ರಾಜ್ಯದ ಸ್ವಾಮಿಗಳು. ಸಮಾನ ಬಲ, ಧನ, ಯಶಸ್ಸು, ಜಾತಿ, ಗೋತ್ರ, ಕುಲ, ಪ್ರದೇಶವುಳ್ಳವರು" ಎಂದು ತಿಳಿದು, "ಹೆಚ್ಚು ಶೀಲವಿರುವವನಿಗೆ ಅವಕಾಶ ಕೊಡಿಸುವೆನು" ಎಂದು ಚಿಂತಿಸಿ, ಆ ಸಾರಥಿಯನ್ನು "ನಿಮ್ಮ ರಾಜನ ಶೀಲಾಚಾರವೆಂತಹದು?" ಎಂದು ಕೇಳಿದನು. ಅವನು "ಇದು ಇದು ನಮ್ಮ ರಾಜನ ಶೀಲಾಚಾರ" ಎಂದು ತನ್ನ ರಾಜನ ಅಗುಣಗಳನ್ನೇ ಗುಣವಾಗಿ ತೋರಿಸುತ್ತ ಮೊದಲ ಗಾಹೆ ಹೇಳಿದನು:

"ದೃಢವನ್ನು ದೃಢತೆಯಿಂದಲೂ ಮೃದುವಾದುದನ್ನು ಮೃದುತ್ವದಿಂದಲೂ ಮಲ್ಲಿಕನು ಬೀಳಿಸುವನು. ಸಾಧುವಾದುದನ್ನು ಸಾಧುತ್ವದಿಂದಲೂ ಅಸಾಧುವಾದುದನ್ನು ಅಸಾಧುವಾದುದರಿಂದಲೂ ಜಯಿಸುವನು. ನಮ್ಮ ರಾಜನು ಇಂತಹವನು. ದಾರಿಯಿಂದ ರಥವನ್ನು ಆಚೆ ಎಳೆ, ಸಾರಥಿ."

ಆಗ ವಾರಣಾಸಿರಾಜನ ಸಾರಥಿಯು "ನಿಮ್ಮ ರಾಜನ ಗುಣಕಥನ ಆಯಿತೆ?" ಎಂದು ಕೇಳಿ, "ಹೌದು" ಎನ್ನಲು, "ಇವೇ

ಗುಣಗಳಾದರೆ ಇವನ ಅಗುಣಗಳು ಎಂತಹವು!" ಎಂದು ಹೇಳಿ, "ಇವು ಅಗುಣಗಳೇ ಆಗಲಿ, ನಿಮ್ಮ ರಾಜನ ಗುಣಗಳೆಂತಹವು?" ಎಂದೆನ್ನಲು "ಹಾಗಾದರೆ ಕೇಳು" ಎಂದು ಎರಡನೆಯ ಗಾಹೆ ಹೇಳಿದನು:

"ಕ್ರೋಧವನ್ನು ಅಕ್ರೋಧದಿಂದ ಜಯಿಸುವನು. ಅಸಾಧುವಾದುದನ್ನು ಸಾಧುವಾದುದರಿಂದ ಜಯಿಸುವನು. ದಾನದಿಂದ ಕೃಪಣನನ್ನೂ ಸತ್ಯದಿಂದ ಸುಳ್ಳಾಡುವವನನ್ನೂ ಜಯಿಸುವನು. ನಮ್ಮ ರಾಜನು ಇಂಥಹವನು. ದಾರಿಯಿಂದ ರಥವನ್ನು ಆಚೆ ಎಳೆ, ಸಾರಥಿ."

ಹೀಗೆನ್ನಲು, ಮಲ್ಲಿಕರಾಜನೂ ಸಾರಥಿಯೂ ಇಬ್ಬರೂ ರಥದಿಂದ ಇಳಿದು, ಕುದುರೆಗಳನ್ನು ಬಿಚ್ಚಿ, ರಥವನ್ನು ಹಿಂದೊಯ್ದು, ವಾರಣಾಸಿ ರಾಜನಿಗೆ ದಾರಿ ಕೊಟ್ಟರು. ವಾರಣಾಸಿರಾಜನು ಮಲ್ಲಿಕರಾಜನಿಗೆ "ಇದು ಇದನ್ನು ಮಾಡುವುದು ಸಲ್ಲುವುದು" ಎಂದು ಬುದ್ಧಿವಾದ ಕೊಟ್ಟು, ವಾರಣಾಸಿಗೆ ಹೋಗಿ, ದಾನಾದಿ ಪುಣ್ಯಗಳನ್ನು ಮಾಡಿ ಜೀವಿತಾಂತ್ಯದಲ್ಲಿ ಸ್ವರ್ಗಪದಗಳನ್ನು ಪೂರೈಸಿದನು. ಮಲ್ಲಿಕರಾಜನು ಕೂಡ ಅವನ ಬುದ್ಧಿವಾದವನ್ನು ಕೊಂಡು ಜನಪದವನ್ನು ಬಳಸಿ, ತನ್ನ ಅಗುಣಗಳನ್ನು ಹೇಳುವವನನ್ನು ಕಾಣದೆಯೆ ಸ್ವನಗರಕ್ಕೆ ಹೋಗಿ, ದಾನಾದಿ ಪುಣ್ಯಗಳನ್ನು ಮಾಡಿ, ಜೀವಿತಾಂತ್ಯದಲ್ಲಿ ಸ್ವರ್ಗಪದವನ್ನು ಪೂರೈಸಿದನು.

## ಗಿರಿದಂತ ಜಾತಕ (೧೮೪)

ಹಿಂದೆ, ವಾರಣಾಸಿಯಲ್ಲಿ ಶ್ಯಾಮರಾಜನೆಂಬವನು ರಾಜ್ಯವಾಳುತ್ತಿದ್ದನು. ಆಗ ಬೋಧಿಸತ್ವನು ಅಮಾತ್ಯಕುಲದಲ್ಲಿ ಹುಟ್ಟಿ, ವಯಸ್ಸು ಬರಲು ಅವನಿಗೆ ಅರ್ಥಧರ್ಮಗಳನ್ನು ಅನುಶಾಸನೆ ಮಾಡುವವನಾದನು.

ರಾಜನಿಗೆ ಪಾಂಡವನೆಂಬ ಮಂಗಳಾಶ್ವವಿತ್ತು. ಅದಕ್ಕೆ ಗಿರಿದಂತನೆಂಬ ಕುದುರೆ ಕಟ್ಟುವವನು; ಅವನು ಕುಂಟ. ಕುದುರೆಯು, ಬಾಯಿ ಹಗ್ಗವನ್ನು ಹಿಡಿದು ಅವನು ಮುಂದೆ ಮುಂದೆ ಹೋಗುವುದನ್ನು ಕಂಡು,

"ನನಗೆ ಹೀಗೆ ಕಲಿಸುವನು" ಎಂದು ಎಣಿಸಿ, ಅವನಂತೆ ಕಲಿತು ಕುಂಟಾಯಿತು. ಅದರ ಕುಂಟತನವನ್ನು ರಾಜನಿಗೆ ತಿಳಿಸಿದರು. ರಾಜನು ವೈದ್ಯರನ್ನು ಕಳುಹಿಸಿದನು. ಅವರು ಹೋಗಿ ಕುದುರೆಯ ಮೈಯಲ್ಲಿ ರೋಗ ಕಾಣದೆ, "ರೋಗವನ್ನು ಕಾಣೆವು" ಎಂದು ರಾಜನಲ್ಲಿ ಹೇಳಿದರು. ರಾಜನು "ಹೋಗು, ಗೆಳೆಯ, ಅದರ ಕಾರಣವನ್ನು ತಿಳಿ" ಎಂದು ಬೋಧಿಸತ್ವನನ್ನು ಕಳುಹಿಸಿದನು. ಅವನು ಹೋಗಿ ಕುಂಟಾದ ಕುದುರೆ ಕಟ್ಟುವವನ ಜೊತೆಯಿಂದ ಅದಕ್ಕೆ ಕುಂಟತನವೆಂದು ತಿಳಿದು, ರಾಜನಿಗೆ ಆ ಅರ್ಥವನ್ನು ತಿಳಿಸಿ, "ಸಂಸರ್ಗದೋಷವೆಂಬುದರಿಂದ ಹೀಗಾಗುವುದು" ಎಂದು ತೋರಿಸಲು ಮೊದಲ ಗಾಹೆ ಹೇಳಿದನು:

"ಕೆಟ್ಟ ಗಿರಿದಂತನಿಂದ ಶ್ಯಾಮನ ಕುದುರೆಯಾದ ಪಾಂಡವವು ಹಳೆಯ ಸಹಜತೆಯನ್ನು ಬಿಟ್ಟು ಅವನನ್ನೇ ಅನುಕರಿಸುವುದು."

ಆಗ ರಾಜನು "ಇದಕ್ಕೆ ಮಾಡತಕ್ಕುದೇನು, ಗೆಳೆಯ ?" ಎಂದು ಅವನನ್ನು ಕೇಳಿದನು. ಬೋಧಿಸತ್ವನು "ಸುಂದರನಾದ ಕುದುರೆಕಟ್ಟುವವನು ದೊರೆತರೆ ಹಿಂದಿನಂತೆಯೆ ಆಗುವುದು" ಎನ್ನುತ್ತ ಎರಡನೆಯ ಗಾಹೆ ಹೇಳಿದನು:

"ಅನುರೂಪನೂ ಸುಂದರನೂ ಆದ ಪುರುಷನು ಅದರ ಮುಖವನ್ನು ಹಿಡಿದು ಕುದುರೆಗಳ ನಡುವೆ ತಿರುಗಿಸಿದರೆ, ಬೇಗನೆ ಕುಂಟತನವನ್ನು ಬಿಟ್ಟು ಅವನನ್ನೇ ಅನುಕರಿಸುವುದು."

ರಾಜನು ಹಾಗೆಯೆ ಮಾಡಿಸಿದನು. ಕುದುರೆಯು ಮೊದಲಿನಂತಾಯಿತು. ರಾಜನು "ತಿರ್ಯಕ್ಕುಗಳ ಆಶಯವನ್ನೂ ಇವನು ತಿಳಿಯುವನು" ಎಂದು ತುಷ್ಟಚಿತ್ತನಾಗಿ ಬೋಧಿಸತ್ವನಿಗೆ ಮಹತ್ತಾದ ಯಶಸ್ಸನ್ನು ಕೊಟ್ಟನು.

## ಸಾಧುಶೀಲ ಜಾತಕ (೨೦೦)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ವನು ಬ್ರಾಹ್ಮಣಕುಲದಲ್ಲಿ ಹುಟ್ಟಿ, ವಯಸ್ಸಾಗಲು ತಕ್ಷಶಿಲೆ



ಸಂಧಿಭೇದ ಜಾತಕ (೩೪೯) [ಪುಟ ೪೩

(Copyright: Director, Archæological Service in Netherlands, India)

(Courtesy: Dr. A. Venkatasubbiah, M.A., Ph.D., LL.B.)



ಕುಕ್ಕುಟ ಜಾತಕ (೩೮೩)　　　[ಪುಟ ೪೪

ಯಲ್ಲಿ ಶಿಲ್ಪಗಳನ್ನು ಗ್ರಹಿಸಿ ಬಂದು, ವಾರಣಾಸಿಯಲ್ಲಿ ಪ್ರಸಿದ್ಧನಾದ ಆಚಾರ್ಯನಾದನು.

ಆಗ ಒಬ್ಬ ಬ್ರಾಹ್ಮಣನಿಗೆ ನಾಲ್ವರು ಹೆಣ್ಣುಮಕ್ಕಳಿದ್ದರು. ಅವರನ್ನು ನಾಲ್ವರು ಪ್ರಾರ್ಥಿಸಿದರು. ಬ್ರಾಹ್ಮಣನು "ಯಾರಿಗೆ ಕೊಡತಕ್ಕದು?" ಎಂದು ತಿಳಿಯದೆ, "ಆಚಾರ್ಯನನ್ನು ಕೇಳಿ ಕೊಡಲು ತಕ್ಕವನಿಗೆ ಕೊಡುವೆನು" ಎಂದು ಅವನ ಬಳಿ ಹೋಗಿ ಅದನ್ನು ಕೇಳುತ್ತ ಮೊದಲ ಗಾಹೆ ಹೇಳಿದನು :

"ಒಬ್ಬನು ಚೆಲುವ, ಒಬ್ಬನು ವಯಸ್ಸಾದವನು, ಒಬ್ಬನ ಜಾತಿ ಒಳ್ಳೆಯದು, ಒಬ್ಬನ ಶೀಲ ಒಳ್ಳೆಯದು. ಬ್ರಾಹ್ಮಣ, ನಿನ್ನನ್ನು ಕೇಳುತ್ತೇನೆ; ಇವರಲ್ಲಿ ಯಾರನ್ನು ಆರಿಸಲಿ?"

ಅದನ್ನು ಕೇಳಿ ಆಚಾರ್ಯನು "ರೂಪಸಂಪದ ಮೊದಲಾದುವು ಕಂಡು ಬಂದರೂ ಶೀಲವಿಲ್ಲದವನು ಹೀನೈಸಲ್ಪಡುವನು. ಅದರಿಂದ ಅವನು ಆಳತೆಯಿಲ್ಲದವನು. ಶೀಲವಿರುವಿಕೆಯು ನನಗೆ ರುಚಿಸುವುದು" ಎಂದು ಅದನ್ನು ಸ್ಪಷ್ಟಪಡಿಸಲು ಎರಡನೆಯ ಗಾಹೆ ಹೇಳಿದನು :

"ರೂಪ ಒಳ್ಳೆಯದು. ಹಾಗೆಯೇ ವಯಸ್ಸೂ ಒಳ್ಳೆಯದು. ಜಾತಿಯಲ್ಲಿಯೂ ಒಳ್ಳೆಯದುಂಟು. ಆದರೆ ಶೀಲವೇ ನನಗೆ ರುಚಿಸುವುದು.

ಬ್ರಾಹ್ಮಣನು ಅವನ ಮಾತು ಕೇಳಿ ಶೀಲವಂತನಿಗೆ ಮಗಳಂದಿರನ್ನು ಕೊಟ್ಟನು.

## ಕ್ಷಾಂತಿವಾದಿ ಜಾತಕ (೩೧೩)

ಹಿಂದೆ, ವಾರಣಾಸಿಯಲ್ಲಿ ಕಲಾಬು ಎಂಬ ಕಾಶಿರಾಜನು ರಾಜ್ಯವಾಳುತ್ತಿದ್ದನು. ಆಗ ಬೋಧಿಸತ್ವನು ಎಂಬತ್ತು ಕೋಟಿ ಸಂಖ್ಯೆಯ ಬ್ರಾಹ್ಮಣ ಕುಲದಲ್ಲಿ ಹುಟ್ಟಿ, ಕುಂಡಕಕುಮಾರನೆಂಬ ಮಾಣವನಾಗಿ, ವಯಸ್ಸಾಗಲು ತಕ್ಷಶಿಲೆಯಲ್ಲಿ ಸರ್ವಶಿಲ್ಪಗಳನ್ನೂ ಕೈವಶಮಾಡಿಕೊಂಡು, ಕುಟುಂಬವನ್ನು ಸ್ಥಾಪಿಸಿ, ತಾಯಿತಂದೆ ಸತ್ತನಂತರ ಧನ

ರಾಶಿಯನ್ನು ಅವಲೋಕಿಸಿ, "ಈ ಧನವನ್ನು ರಾಶಿಮಾಡಿ ನನ್ನ ಜ್ಞಾತಿಗಳು ತೆಗೆದುಕೊಳ್ಳದೆಯೆ ಹೋದರು. ನಾನು ಇದನ್ನು ತೆಗೆದುಕೊಂಡು ಹೋಗಬೇಕಲ್ಲವೆ!" ಎಂದು ಆ ಧನವೆಲ್ಲವನ್ನೂ ದಾನಕ್ಕೆ ಅರ್ಹರಾದವರು ಯಾರೋ ಅವರಿಗೆ ವಿಚಾರಿಸಿ ದಾನಕೊಟ್ಟು, ಹಿಮವಂತವನ್ನು ಪ್ರವೇಶಿಸಿ, ಪರಿವ್ರಜಿಸಿ, ಫಲಾಫಲಗಳಿಂದ ಕಾಲಯಾಪನೆ ಮಾಡುತ್ತ ಬಹುಕಾಲ ವಾಸಿಸಿ, ಉಪ್ಪು ಹುಳಿಗಳಿಗಾಗಿ ಜನರ ದಾರಿಗೆ ಹೋಗಿ, ಕ್ರಮವಾಗಿ ವಾರಣಾಸಿಯನ್ನು ಸೇರಿ, ರಾಜೋದ್ಯಾನದಲ್ಲಿ ವಾಸಿಸಿ, ಮರುದಿವಸ ನಗರದಲ್ಲಿ ಭಿಕ್ಷೆಗಾಗಿ ತಿರುಗುತ್ತ ಸೇನಾಪತಿಯ ಮನೆ ಬಾಗಿಲನ್ನು ಸೇರಿದನು. ಸೇನಾಪತಿಯು ಅವನ ನಡೆವಳಿಗೆ ಪ್ರಸನ್ನನಾಗಿ ಮನೆಯೊಳಗೆ ಕರೆತಂದು ತನಗೆ ಸಿದ್ಧವಾಗಿದ್ದ ಊಟವನ್ನು ಉಣಿಸಿ, ಅಲ್ಲಿಯೇ ರಾಜೋದ್ಯಾನದಲ್ಲಿ ವಾಸಿಸುವಂತೆ ಮಾಡಿದನು.

ಆಗ ಒಂದು ದಿವಸ ಕಲಾಬುರಾಜನು ಸುರಾಮದಮತ್ತನಾಗಿ ನಟರ ಪರಿವಾರದೊಡನೆ ಮಹಾಯಶದಿಂದ ಉದ್ಯಾನಕ್ಕೆ ಹೋಗಿ, ಮಂಗಳ ಶಿಲಾಪಟ್ಟದಲ್ಲಿ ಹಾಸಿಗೆ ಹಾಸಿಸಿ, ಒಬ್ಬಾನೊಬ್ಬೆ ಮನಸ್ಸಿಗೆ ಪ್ರಿಯಳಾದ ಸ್ತ್ರೀಯ ತೊಡೆಯಲ್ಲಿ ಮಲಗಿದನು. ಗೀತ ವಾದಿತ ನೃತ್ತ್ಯಗಳಲ್ಲಿ ಚತುರರಾದ ನಾಟಕಸ್ತ್ರೀಯರು ಗೀತಾದಿಗಳನ್ನು ಪ್ರಯೋಗಿಸಿದರು. ದೇವರಾಜನಾದ ಶಕ್ರನಂತೆ ಅವನಿಗೆ ಮಹಾಸಂಪದವಾಯಿತು. ರಾಜನು ನಿದ್ರೆಹೋದನು.

ಆಗ ಆ ಸ್ತ್ರೀಯರು "ಯಾರಿಗಾಗಿ ನಾವು ಗೀತಾದಿಗಳನ್ನು ಪ್ರಯೋಗಿಸುವೆವೋ ಅವನು ನಿದ್ರೆಹೋದನು. ನಮಗೆ ಗೀತಾದಿಗಳೇಕೆ?" ಎಂದು ವೀಣಾದಿ ತೂರ್ಯಗಳನ್ನು ಅಲ್ಲಲ್ಲೇ ಬಿಟ್ಟು, ಉದ್ಯಾನವನ್ನು ತಿರುಗುತ್ತ, ಪುಷ್ಪ ಫಲ ಪಲ್ಲವಗಳಿಗೆ ಮನಸ್ಸುಕೊಟ್ಟು ಉದ್ಯಾನದಲ್ಲಿ ಅಭಿರಮಿಸುತ್ತಿದ್ದರು.

ಆಗ ಬೋಧಿಸತ್ವನು ಆ ಉದ್ಯಾನದಲ್ಲಿ ಚೆನ್ನಾಗಿ ಹೂಬಿಟ್ಟ ಶಾಲ ವೃಕ್ಷದ ಬುಡದಲ್ಲಿ ಪ್ರವ್ರಜ್ಯದ ಸುಖವನ್ನು ಅನುಭವಿಸುತ್ತ ಮದಿಸಿದ

ವಾರಣವರದಂತೆ ಕುಳಿತಿದ್ದನು. ಆಗ ಆ ಸ್ತ್ರೀಯರು ತಿರುಗುತ್ತ ಬಂದು ಅವನನ್ನು ಕಂಡು, "ಬನ್ನಿ ಆರ್ಯೆಯರೆ, ಈ ವೃಕ್ಷಮೂಲದಲ್ಲಿ ಕುಳಿತಿರುವ ಪ್ರವ್ರಜಿತನಿಂದ, ರಾಜನು ಏಳುವವರೆಗೆ, ಅವನ ಬಳಿ ಏನಾದರೂ ಕೇಳುತ್ತ ಕುಳಿತಿರುವ" ಎಂದು ಹೋಗಿ, ವಂದಿಸಿ, ಬಳಸಿ ಕುಳಿತು, "ನಮಗೆ ಹೇಳತಕ್ಕುದಾದ ಏನನ್ನಾದರೂ ಹೇಳಿರಿ" ಎಂದರು. ಬೋಧಿಸತ್ವನು ಅವರಿಗೆ ಧರ್ಮವನ್ನು ಹೇಳಿದನು.

ಆಗ ಆ ಸ್ತ್ರೀಯು ಅಲುಗಾಡಿ ರಾಜನನ್ನು ಎಚ್ಚರಿಸಿದಳು. ರಾಜನು ಎಚ್ಚತ್ತು ಅವರನ್ನು ಕಾಣದೆ "ಚಂಡಾಲಿಯರು ಎಲ್ಲಿ ಹೋದರು?" ಎಂದನು. ಆ ಸ್ತ್ರೀ, "ಅವರು ಹೋಗಿ, ಮಹಾರಾಜ, ಒಬ್ಬ ತಾಪಸ ನನ್ನು ಬಳಸಿ ಕುಳಿತಿರುವರು" ಎಂದಳು. ರಾಜನು ಕುಪಿತನಾಗಿ ಖಡ್ಗ ವನ್ನು ಹಿಡಿದು, "ಆ ಕುಟಿಲ ಜಟಿಲನಿಗೆ ಕಲಿಸುತ್ತೇನೆ" ಎಂದು ವೇಗ ದಿಂದ ಹೊರಟನು. ಆಗ ಆ ಸ್ತ್ರೀಯರು ರಾಜನು ಕ್ರುದ್ಧನಾಗಿ ಬರುವು ದನ್ನು ಕಂಡರು. ಅವರಲ್ಲಿ ಅವನಿಗೆ ಹೆಚ್ಚು ವಲ್ಲಭೆಯಾದವಳು ಹೋಗಿ ರಾಜನ ಕೈಯಿಂದ ಖಡ್ಗವನ್ನು ಕೊಂಡು ರಾಜನನ್ನು ಶಾಂತ ಮಾಡಿದಳು.

ಅವನು ಬಂದು ಬೋಧಿಸತ್ವನ ಬಳಿ ನಿಂತು, "ನೀನು ಹೇಳುವು ದೇನು, ಶ್ರಮಣ?" ಎಂದು ಕೇಳಿದನು.

"ನಾನು ಕ್ಷಾಂತಿವಾದಿ, ಮಹಾರಾಜ."

"ಈ ಕ್ಷಾಂತಿಯೆಂಬುದೇನು?"

"ಕೋಪಗೊಂಡವರಲ್ಲಿ, ಹೊಡೆದವರಲ್ಲಿ, ಬೈದವರಲ್ಲಿ ಕೋಪ ಗೊಳ್ಳದಿರುವುದು."

ರಾಜನು "ಹಾಗಾದರೆ, ನಿನ್ನಲ್ಲಿ ಕ್ಷಾಂತಿಯಿರುವುದನ್ನು ನೋಡು ವೆನು" ಎಂದು ಚೋರಘಾತಕನನ್ನು ಕರೆಕಳುಹಿದನು. ಅವನು ತನ್ನ ಕೆಲಸದ ಕೊಡಲಿಯನ್ನೂ ಮುಳ್ಳಿನ ಕಶೆಯನ್ನೂ ಕೊಂಡು ಕಾಷಾಯ

ವಸನನಾಗಿ ರಕ್ತಮಾಲಾಧರನಾಗಿ ಬಂದು ರಾಜನಿಗೆ ವಂದಿಸಿ, "ಏನು ಮಾಡಲಿ?" ಎಂದನು.

"ಈ ಕಳ್ಳ ಕೆಟ್ಟ ತಾಪಸನನ್ನು ಹಿಡಿದೆಳೆದು, ನೆಲಕ್ಕೆ ಬೀಳಿಸಿ, ಮುಳ್ಳಿನ ಕಶೆಯನ್ನು ಹಿಡಿದು ಮುಂದೆ ಹಿಂದೆ ಎರಡೂ ಕಡೆ, ನಾಲ್ಕೂ ಕಡೆ, ಎರಡು ಸಾವಿರ ಪ್ರಹಾರಗಳನ್ನು ಕೊಡು."

ಅವನು ಹಾಗೆಯೆ ಮಾಡಿದನು. ಬೋಧಿಸತ್ವನ ಹೊರಚರ್ಮ ಹರಿಯಿತು, ಒಳಚರ್ಮ ಹರಿಯಿತು, ಮಾಂಸ ಹರಿಯಿತು, ರಕ್ತ ಸುರಿಯಿತು.

ಪುನಃ ರಾಜನು "ಏನು ನೀನು ಹೇಳುವುದು, ಭಿಕ್ಷು?" ಎಂದನು.

"ನಾನು ಕ್ಷಾಂತಿವಾದಿ, ಮಹಾರಾಜ. ಕ್ಷಾಂತಿ ನನ್ನ ಚರ್ಮದೊಳಗಿರುವುದೆಂದು ತಿಳಿದಿರುವೆಯಾ? ಕ್ಷಾಂತಿ ನನ್ನ ಚರ್ಮದೊಳಗಿಲ್ಲ. ನಿನಗೆ ಕಾಣಲಾಗದಂತೆ ನನ್ನ ಹೃದಯದೊಳಗೆ ಕ್ಷಾಂತಿ ಪ್ರತಿಷ್ಠಿತವಾಗಿದೆ; ಮಹಾರಾಜ."

ಪುನಃ ಚೋರಘಾತಕನು "ಏನು ಮಾಡಲಿ?" ಎಂದು ಕೇಳಿದನು,

"ಈ ಕೂಟಜಟಿಲನ ಎರಡೂ ಕೈಗಳನ್ನು ಕತ್ತರಿಸು."

ಅವನು ಕೊಡಲಿ ಹಿಡಿದು ಕೈಗಳನ್ನು ಮರದ ತುಂಡಿನ ಮೇಲಿಟ್ಟು ಕತ್ತರಿಸಿದನು. ಆಗ ರಾಜನು "ಕಾಲುಗಳನ್ನು ಕತ್ತರಿಸು" ಎಂದನು. ಕಾಲುಗಳನ್ನು ಕತ್ತರಿಸಿದನು. ಕೈಕಾಲುಗಳ ತುದಿಯಿಂದ ಮುರಿದ ಮಡಕೆಯಿಂದ ಬರುವ ಲಾಕ್ಷಾರಸದಂತೆ ರಕ್ತ ಸುರಿಯಿತು.

ಪುನಃ ರಾಜನು "ನೀನು ಹೇಳುವುದೇನು?" ಎಂದು ಕೇಳಿದನು.

"ನಾನು ಕ್ಷಾಂತಿವಾದಿ, ಮಹಾರಾಜ. ನನ್ನ ಕೈಕಾಲುಗಳ ತುದಿಯಲ್ಲಿ ನನ್ನ ಕ್ಷಾಂತಿಯಿದೆಯೆಂದು ತಿಳಿದಿರುವೆಯ? ಅದು ಅಲ್ಲಿಲ್ಲ. ನನ್ನ ಕ್ಷಾಂತಿಯು ಆಳವಾದೆಡೆ ಪ್ರತಿಷ್ಠಿತವಾಗಿದೆ" ಎಂದನು.

ರಾಜನು "ಇವನ ಕಿವಿಮೂಗುಗಳನ್ನು ಕತ್ತರಿಸು" ಎಂದನು. ಅವನು ಕಿವಿಮೂಗುಗಳನ್ನು ಕತ್ತರಿಸಿದನು. ಸಕಲಶರೀರವೂ ರಕ್ತಮಯವಾಯಿತು.

ಪುನಃ ಅವನನ್ನು "ಯಾವ ವಾದಿ ನೀನು ?" ಎಂದು ರಾಜನು ಕೇಳಿದನು.

"ನಾನು ಕ್ಷಾಂತಿವಾದಿಯೆಂಬವನು, ಮಹಾರಾಜ. ನನ್ನ ಕ್ಷಾಂತಿ ಕಿವಿ ಮೂಗುಗಳ ತುದಿಯಲ್ಲಿ ಇರುವುದೆಂದೆಣಿಸಬೇಡ. ನನ್ನ ಕ್ಷಾಂತಿಯು ಆಳವಾಗಿ ಹೃದಯದೊಳಗೆ ಪ್ರತಿಷ್ಠಿತವಾಗಿದೆ."

ರಾಜನು "ಕೂಟಜಟಿಲ, ನಿನ್ನ ಕ್ಷಾಂತಿಯನ್ನು ನೀನೇ ಎತ್ತಿಕೊಂಡು ಬಿದ್ದುಕೊ" ಎಂದು ಬೋಧಿಸತ್ವನ ಎದೆಯ ಮೇಲೆ ಕಾಲಿನಿಂದ ಒದ್ದು ಹೊರಟನು.

ಅವನು ಹೋಗಲು, ಸೇನಾಪತಿಯು ಬೋಧಿಸತ್ವನ ಶರೀರದ ರಕ್ತವನ್ನು ಒರಸಿ, ಕೈಕಾಲು ಕಿವಿಮೂಗುಗಳ ತುದಿಗೆ ಬಟ್ಟೆ ಕಟ್ಟಿ, ಬೋಧಿಸತ್ವನನ್ನು ಮೆಲ್ಲನೆ ಕುಳ್ಳಿರಿಸಿ, ವಂದಿಸಿ, ಒಂದು ಕಡೆ ಕುಳಿತು, "ಭನ್ತೇ, ನೀನು ಕೋಪಿಸುವುದಾದರೆ, ನಿನಗೆ ಅಪರಾಧಮಾಡಿದ ರಾಜನ ಮೇಲೆ ಕೋಪಿಸಿಕೊ. ಬೇರೆಯವರ ಮೇಲೆ ಬೇಡ" ಎಂದು ಬೇಡುತ್ತ ಮೊದಲ ಗಾಹೆ ಹೇಳಿದನು :

"ಮಹಾವೀರ, ನಿನ್ನ ಕೈಕಾಲು ಕಿವಿ ಮೂಗುಗಳನ್ನು ಕತ್ತರಿಸಿದವರ ಮೇಲೆ ಕೋಪಿಸು. ಇದಕ್ಕಾಗಿ ರಾಷ್ಟ್ರವನ್ನು ನಾಶಮಾಡಬೇಡ."

ಅದನ್ನು ಕೇಳಿ ಬೋಧಿಸತ್ವನು ಎರಡನೆಯ ಗಾಹೆ ಹೇಳಿದನು :

"ನನ್ನ ಕೈಕಾಲು ಕಿವಿ ಮೂಗುಗಳನ್ನು ಕತ್ತರಿಸಿದ ರಾಜನು ಚಿರಕಾಲ ಜೀವಿಸಲಿ. ನನ್ನಂತಹವರು ಕೋಪಿಸುವುದಿಲ್ಲ."

ರಾಜನು ಉದ್ಯಾನದಿಂದ ಹೊರಡುವಾಗ, ಬೋಧಿಸತ್ವನ ದೃಷ್ಟಿಪಥವನ್ನು ಬಿಟ್ಟುಹೋಗುವ ಕಾಲದಲ್ಲಿಯೇ ಇಪ್ಪತ್ತನಾಲ್ಕು ಲಕ್ಷ ಯೋಜನಗಳ ದಪ್ಪವಿರುವ ಈ ಮಹಾಪೃಥ್ವಿಯು ಬಲವಾದ ದಪ್ಪ ಬಟ್ಟೆ

ಯಂತೆ ಸೀಳಿತು ; ಅವೀಚೀನರಕದಿಂದ ಜ್ವಾಲೆ ಹೊರಟು, ಕುಲದಲ್ಲಿ ಕೊಟ್ಟ ರಕ್ತಕಂಬಳದಿಂದ ಮುಚ್ಚುವಂತೆ ರಾಜನನ್ನು ಹಿಡಿದುಕೊಂಡಿತು. ಅವನು ಉದ್ಯಾನದ್ವಾರದಲ್ಲಿಯೇ ಪೃಥ್ವಿಯನ್ನು ಪ್ರವೇಶಿಸಿ ಅವೀಚೀ ಮಹಾನಿರಯದಲ್ಲಿ ನೆಲಸಿದನು.

ಬೋಧಿಸತ್ವನು ಆ ದಿವಸವೇ ಕಾಲವಾದನು. ರಾಜಪುರುಷರೂ ನಾಗರಿಕರೂ ಕೈಯಲ್ಲಿ ಗಂಧಮಾಲಾಧೂಪಗಳನ್ನು ತಂದು ಬೋಧಿಸತ್ವನ ಶರೀರಕೃತ್ಯವನ್ನು ಮಾಡಿದರು.

ಕೆಲವರು "ಬೋಧಿಸತ್ವನು ಪುನಃ ಹಿಮವಂತಕ್ಕೆ ಹೋದನು" ಎಂದರು. ಅದು ನಡೆದುದಲ್ಲ.

"ಹಿಂದಿನ ಕಾಲದಲ್ಲಿ ಕ್ಷಾಂತಿಯನ್ನು ಬೆಳಗುವ ಶ್ರಮಣನಿದ್ದನು. ಅವನ ಕ್ಷಾಂತಿಗಾಗಿಯೇ ಕಾಶಿರಾಜನು ಅವನನ್ನು ಕೊಲ್ಲಿಸಿದನು.

"ಅವನ ಪರುಷವಾದ ಕರ್ಮಕ್ಕೆ ಕಟುವಾದ ವಿಪಾಕವಾಯಿತು. ಅದನ್ನು ಕಾಶಿರಾಜನು ನಿರಯದಲ್ಲಿ ಸಂದು ಅನುಭವಿಸುವನು."

ಇವು ಎರಡೂ ಅಭಿಸಂಬುದ್ಧ ಗಾಹೆಗಳು.

## ಮಾಂಸ ಜಾತಕ (೩೧೫)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ವನು ಒಬ್ಬ ಶ್ರೇಷ್ಠಿಯ ಮಗನಾದನು. ಆಗ ಒಂದು ದಿವಸ ಒಬ್ಬ ಜಿಂಕೆಯಬೇಡನು ಬಹಳ ಮಾಂಸವನ್ನು ಪಡೆದು ಬಂಡಿಯನ್ನು ತುಂಬಿ, "ಇದನ್ನು ಮಾರುವೆನು" ಎಂದು ನಗರಕ್ಕೆ ಬಂದನು. ಆಗ ವಾರಣಾಸಿಯಲ್ಲಿ ವಾಸಿಸುತ್ತಿದ್ದ ನಾಲ್ವರು ಶ್ರೇಷ್ಠಿಪುತ್ರರು ನಗರದಿಂದ ಹೊರಹೊರಟು ಒಂದಾನೊಂದು ದಾರಿ ಕವಲೊಡೆಯುವಲ್ಲಿ ಏನೋ ಕಂಡು ಕೇಳಿದುದನ್ನು ಮಾತನಾಡುತ್ತ ಕುಳಿತಿದ್ದರು. ಅವರಲ್ಲಿ ಒಬ್ಬ

ಶ್ರೇಷ್ಠಿಪುತ್ರನು ಮಾಂಸದ ಬಂಡಿ ಕಂಡು "ಈ ಬೇಡನಿಂದ ಮಾಂಸಖಂಡವನ್ನು ತರುವೆನು" ಎಂದನು.

"ಹೋಗು, ತಾ"

ಅವನು ಅವನ ಬಳಿ ಸಾರಿ "ಏ ಬೇಡ, ನನಗೆ ಮಾಂಸಖಂಡ ಕೊಡು" ಎಂದನು.

ಬೇಡನು "ಪರರನ್ನು ಏನಾದರೂ ಬೇಡುವವರು ಪ್ರಿಯವಾಗಿ ಮಾತನಾಡಬೇಕು. ನೀನು ಹೇಳಿದ ಮಾತಿಗೆ ಅನುರೂಪವಾದ ಮಾಂಸಖಂಡ ಸಿಕ್ಕುವುದು" ಎಂದು ಹೇಳುತ್ತ ಮೊದಲ ಗಾಹೆ ಹೇಳಿದನು:

"ಅಯ್ಯ, ನೀನು ಯಾಚಕನಾಗಿರುವೆ. ನಿನ್ನ ಮಾತು ಒರಟು. ಒರಟುತನದ ನಿನ್ನ ಮಾತಿಗೆ ಸಮನಾಗಿ ಒರಟಾದುದನ್ನೆ ಕೊಡುವೆನಯ್ಯ"

ಆಗ ಇನ್ನೊಬ್ಬ ಶ್ರೇಷ್ಠಿಪುತ್ರನು ಅವನನ್ನು "ಏನೆಂದು ಬೇಡಿದೆ?" ಎಂದು ಕೇಳಿದನು. "ಏ ಎಂದು" ಎಂದನು. ಅವನು "ನಾನೂ ಅವನನ್ನು ಬೇಡುವೆನು" ಎನ್ನುತ್ತ ಹೋಗಿ "ಅಣ್ಣ, ನನಗೆ ಮಾಂಸಖಂಡ ಕೊಡು" ಎಂದನು. ಅವನು "ನಿನ್ನ ಮಾತಿಗೆ ಅನುರೂಪವಾದುದು ಸಿಕ್ಕುವುದು" ಎಂದು ಎರಡನೆಯ ಗಾಹೆ ಹೇಳಿದನು:

"ಸೋದರನನ್ನು ಲೋಕದಲ್ಲಿ ಮನುಷ್ಯರ ಅಂಗಗಳೆನ್ನುವರು. ಅಂಗಕ್ಕೆ ಸದೃಶವಾದ ಮಾತಿನಿಂದ ಅಂಗವನ್ನು ನಿನಗೆ ಕೊಡುವೆನಯ್ಯ"

ಹೀಗೆಂದು ಹೇಳಿ ಅಂಗಮಾಂಸವನ್ನು ಎತ್ತಿಕೊಟ್ಟನು.

ಇನ್ನೊಬ್ಬ ಶ್ರೇಷ್ಠಿಪುತ್ರನು "ಏನೆಂದು ಬೇಡಿದೆ?" ಎಂದು ಕೇಳಿದನು. "ಅಣ್ಣ ಎಂದು" ಎನ್ನಲು, "ನಾನೂ ಅವನನ್ನು ಬೇಡುವೆನು" ಎಂದು ಅವನು ಹೋಗಿ, "ಅಪ್ಪ, ನನಗೆ ಮಾಂಸಖಂಡ ಕೊಡು" ಎಂದನು. ಬೇಡನು "ನಿನಗೆ ನಿನ್ನ ಮಾತಿಗೆ ತಕ್ಕಂತಹುದು ಸಿಕ್ಕುವುದು" ಎನ್ನುತ್ತ ಮೂರನೆಯ ಗಾಹೆ ಹೇಳಿದನು:

"ಮಗನು 'ಅಪ್ಪ' ಎಂದರೆ, ತಂದೆಯ ಹೃದಯ ಕಂಪಿಸುವುದು. ಹೃದಯಕ್ಕೆ ಸಮನಾದ ಮಾತಿನಿಂದ ಹೃದಯವನ್ನು ನಿನಗೆ ಕೊಡುವೆನಯ್ಯ"

ಎಂದು ಹೇಳಿ ಹೃದಯಮಾಂಸದೊಡನೆ ಮಧುರಮಾಂಸವನ್ನೂ ಎತ್ತಿ ಕೊಟ್ಟನು.

ಆಗ ನಾಲ್ಕನೆಯ ಶ್ರೇಷ್ಠಿಪುತ್ರನು "ಏನೆಂದುಬೇಡಿದೆ?" ಎಂದು ಕೇಳಿದನು. "ಅಪ್ಪ ಎಂದು" ಎನ್ನಲು, "ನಾನೂ ಬೇಡುವೆನು" ಎಂದು ಅವನು ಹೋಗಿ, "ಗೆಳೆಯ, ನನಗೆ ಮಾಂಸಖಂಡ ಕೊಡು" ಎಂದನು. ಬೇಡನು "ನಿನ್ನ ಮಾತಿಗೆ ಅನುರೂಪವಾಗಿ ಸಿಕ್ಕುವುದು" ಎಂದು ನಾಲ್ಕನೆಯ ಗಾಹೆ ಹೇಳಿದನು:

"ಸಖರಿಲ್ಲದ ಗ್ರಾಮ ಅರಣ್ಯವಿದ್ದಂತೆ. ಎಲ್ಲಕ್ಕೂ ಸದೃಶವಾದ ಮಾತಿನಿಂದ ನಿನಗೆ ಎಲ್ಲವನ್ನೂ ಕೊಡುವೆನಯ್ಯ"

ಎಂದು ಹೇಳಿ, "ಬಾರಯ್ಯ, ಈ ಎಲ್ಲ ಮಾಂಸದ ಬಂಡಿಯನ್ನು ನಿನ್ನ ಮನೆಗೆ ತರುವೆನು" ಎಂದನು. ಶ್ರೇಷ್ಠಿಪುತ್ರನು ಅವನ ಗಾಡಿಯನ್ನು ಹೊಡೆಯಿಸಿಕೊಂಡು ತನ್ನ ಮನೆಗೆ ಹೋಗಿ, ಮಾಂಸವನ್ನು ಇಳಿಸಿ, ಬೇಡನಿಗೆ ಸತ್ಕಾರ ಸನ್ಮಾನಗಳನ್ನು ಮಾಡಿ, ಅವನ ಹೆಂಡತಿ ಮಕ್ಕಳನ್ನು ಕರೆಕಳುಹಿ, ಬೇಡರ ಕೆಲಸದಿಂದ ಅವರನ್ನು ಬಿಡಿಸಿ, ತನ್ನ ಕುಟುಂಬದ ನಡುವೆ ವಾಸಮಾಡಿಸಿ, ಅವನೊಡನೆ ಸ್ನೇಹವನ್ನು ಮುರಿಯದೆ ಜೀವವಿರುವವರೆಗೆ ಒಟ್ಟಾಗಿ ವಾಸಿಸಿದನು.

## ಸುಜಾತ ಜಾತಕ (೩೫೨)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ತ್ವನು ಒಂದು ಕುಟುಂಬದ ಮನೆಯಲ್ಲಿ ಹುಟ್ಟಿದನು. ಸುಜಾತ ಕುಮಾರನೆಂದು ಅವನಿಗೆ ಹೆಸರಿಟ್ಟರು.

ಅವನಿಗೆ ವಯಸ್ಸಾಗಲು ಅವನ ಪಿತಾಮಹನು ಕಾಲವಾದನು. ಆಗ ಅವನ ತಂದೆಯು ತನ್ನ ತಂದೆ ಸತ್ತಂದಿನಿಂದ ಹಿಡಿದು ಶೋಕಕ್ಕೆ ವಶನಾಗಿ, ಸುಡುಗಾಡಿನಿಂದ ಮೂಳೆಗಳನ್ನು ತಂದು, ತನ್ನ ಆರಾಮದಲ್ಲಿ

ಮಣ್ಣಿನ ಸ್ತೂಪವನ್ನು ಮಾಡಿ, ಅಲ್ಲಿ ಅದನ್ನು ಹೂಳಿ, ಹೋದಹೋದಾಗ ಸ್ತೂಪವನ್ನು ಪುಷ್ಪಗಳಿಂದ ಪೂಜಿಸಿ, ನೆನೆನೆನೆದು ಗೋಳಾಡುವನು. ಸ್ನಾನಮಾಡನು, ಲೇಪಿಸಿಕೊಳ್ಳನು, ಉಣ್ಣನು, ಕೆಲಸಗಳಲ್ಲಿ ತೊಡಗನು.

ಅದನ್ನು ಕಂಡು ಬೋಧಿಸತ್ವನು "ನನ್ನ ತಂದೆಯು ಆರ್ಯನು ಸತ್ತ ಕಾಲದಿಂದ ಹಿಡಿದು ಶೋಕಕ್ಕೆ ತಗ್ಗಿ ನಡೆಯುವನು. ನನ್ನ ಹೊರತು ಬೇರೆಯಾರೂ ಇವನಿಗೆ ತಿಳಿಸಲಾರರು. ಒಂದಾನೊಂದು ಉಪಾಯದಿಂದ ಶೋಕವಿಲ್ಲದಂತೆ ಮಾಡುವೆನು" ಎಂದು, ನಗರದ ಹೊರಗೆ ಒಂದು ಸತ್ತ ಎತ್ತನ್ನು ಕಂಡು, ಹುಲ್ಲು ನೀರನ್ನು ತಂದು ಅದರ ಎದುರಿಗಿಟ್ಟು, "ತಿನ್ನು, ತಿನ್ನು, ಕುಡಿ, ಕುಡಿ," ಎಂದು ಹೇಳಿದನು.

ಬಂದುಬಂದವರು ಆವನನ್ನು ಕಂಡು, "ಅಯ್ಯಾ ಸುಜಾತ, ಏಕೆ ಹುಚ್ಚನಾಗಿರುವೆ? ಸತ್ತ ಎತ್ತಿಗೆ ಹುಲ್ಲುನೀರು ಕೊಡುವೆ?" ಎಂದು ಕೇಳಿದರು. ಅವನು ಏನೂ ಪ್ರತಿ ಹೇಳಲಿಲ್ಲ. ಆಗ ಅವರು ಅವನ ತಂದೆಯ ಬಳಿ ಹೋಗಿ, "ನಿನ್ನ ಮಗ ಹುಚ್ಚನಾದನು. ಸತ್ತ ಎತ್ತಿಗೆ ಹುಲ್ಲು ನೀರು ಕೊಡುವನು" ಎಂದರು. ಅದನ್ನು ಕೇಳಿ ಆ ಕುಟುಂಬಿಕನ ಪಿತೃಶೋಕ ಮರೆಯಾಗಿ ಪುತ್ರಶೋಕ ನಿಂತಿತು. ಅವನು ಬೇಗ ಹೋಗಿ "ಅಪ್ಪ ಸುಜಾತ, ನೀನು ಪಂಡಿತ. ಸತ್ತ ಎತ್ತಿಗೆ ಹುಲ್ಲು ನೀರು ಕೊಡುವೆ, ಏಕೆ?" ಎಂದು ಹೇಳುತ್ತ ಎರಡನೆಯ ಗಾಹೆ ಹೇಳಿದನು:

"ಬೇಗಬೇಗನೆ ಹಸುರು ಹುಲ್ಲು ಕುಯಿದು ತಂದು, ಸತ್ತ ಮುದಿ ಎತ್ತನ್ನು ಕುರಿತು 'ತಿನ್ನು ತಿನ್ನು' ಎಂದೇಕೆ ಗೋಳಾಡುವೆ?"

"ಸತ್ತ ಎತ್ತು ಅನ್ನ ನೀರಿನಿಂದ ಏಳುವುದಿಲ್ಲ. ಬುದ್ಧಿಯಿಲ್ಲದ ನೀನು ತುಚ್ಛವಾಗಿ ಗೋಳಾಡುವೆ!"

ಆಗ ಬೋಧಿಸತ್ವನು ಎರಡು ಗಾಹೆ ಹೇಳಿದನು:

"ಇದರ ತಲೆ ಕೈಕಾಲುಗಳೂ ಬಾಲವೂ ಹಾಗೆಯೇ ಇವೆ. ಕಿವಿಗಳೂ ಹಾಗೆಯೇ ಇವೆ. ಎತ್ತು ಏಳುವುದೆಂದು ಎಣಿಸುತ್ತೇನೆ.

"ಆದರೆ ಅಜ್ಜನ ತಲೆಯಾಗಲಿ ಕೈ ಕಾಲುಗಳಾಗಲಿ ಕಾಣವು. ಮಣ್ಣುಗುಡ್ಡೆಯಮೇಲೆ ಅಳುವ ನೀನೇ ಬುದ್ಧಿಯಿಲ್ಲದವನು."

ಅದನ್ನು ಕೇಳಿ ಬೋಧಿಸತ್ವನ ತಂದೆಯು "ನನ್ನ ಮಗ ಪಂಡಿತ. ಇಹಲೋಕ ಪರಲೋಕಗಳಲ್ಲಿ ಮಾಡತಕ್ಕುದನ್ನು ತಿಳಿದಿರುವನು. ನನಗೆ ತಿಳಿಸುವುದಕ್ಕಾಗಿ ಈ ಕಾರ್ಯ ಮಾಡಿದನು" ಎಂದು ಚಿಂತಿಸಿ, "ಅಪ್ಪ, ಪಂಡಿತನಾದ ಸುಜಾತ, 'ಸರ್ವಸಂಸ್ಕಾರಗಳೂ ಅನಿತ್ಯ' ಎಂದು ನನಗೆ ಗೊತ್ತಾಯಿತು. ಇಂದಿನಿಂದ ನಾನು ಶೋಕಪಡುವುದಿಲ್ಲ. ತಂದೆಯು ಶೋಕವನ್ನು ಕಳೆಯುವವನು ನಿನ್ನಂತಹ ಮಗನಾಗಿರಬೇಕು" ಎಂದು ಹೇಳುತ್ತ, ಮಗನನ್ನು ಸ್ತುತಿಸಿದನು:

"ಸದಾ ತುಪ್ಪ ತಳಿದ ಉರಿಯುವ ಬೆಂಕಿಯನ್ನು ನೀರಿನಿಂದ ಆರಿಸಿದಂತೆ ನನ್ನ ನೋವೆಲ್ಲವನ್ನೂ ಆರಿಸಿದನು.

"ನನ್ನ ಹೃದಯದಲ್ಲಿ ನೆಲಸಿದ್ದ ಶಲ್ಯವನ್ನು ಹೊರೆದೆಗೆದನು. ಶೋಕ ಪರೀತನಾದ ನನ್ನ ಪಿತೃಶೋಕವನ್ನು ಕಳೆದನು.

"ನಾನು ಶಲ್ಯಕಿತ್ತವನಾದೆ, ಶೋಕಹೋದವನಾದೆ, ಕೊಳೆಯಿಲ್ಲದವ ನಾದೆ. ಮಗು, ನಿನ್ನ ಮಾತು ಕೇಳಿ ನಾನು ಶೋಕಿಸುವುದಿಲ್ಲ, ರೋದಿಸು ವುದಿಲ್ಲ.

"ಹೀಗೆ, ಅನುಕಂಪವುಳ್ಳ ಪ್ರಜ್ಞಾವಂತರು, ಸುಜಾತನು ತಂದೆಯನ್ನು ಹೇಗೋ ಹಾಗೆ, ಶೋಕದಿಂದ ಹಿಂದಿರುಗಿಸುವರು."

## ಉರಗ ಜಾತಕ (೩೫೪)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ, ಬೋಧಿಸತ್ವನು ವಾರಣಾಸಿಯ ದ್ವಾರದ ಗ್ರಾಮದ ಬ್ರಾಹ್ಮಣ ಕುಲದಲ್ಲಿ ಕುಟುಂಬವನ್ನು ಸ್ಥಾಪಿಸಿ ಕೃಷಿಕರ್ಮದಿಂದ ಜೀವಿಸುತ್ತಿದ್ದನು. ಅವನಿಗೆ ಇಬ್ಬರು ಗಂಡು ಹೆಣ್ಣು ಮಕ್ಕಳಿದ್ದರು. ಅವನು ವಯಸ್ಸು ಬಂದ ಮಗನಿಗೆ ಸಮಾನಕುಲದಿಂದ ಕುಮಾರಿಕೆಯನ್ನು ತಂದನು. ಹೀಗೆ ಅವರು, ದಾಸಿಯೊಡನೆ, ಆರು ಜನವಾದರು: ಬೋಧಿಸತ್ವ, ಹೆಂಡತಿ, ಮಗ, ಮಗಳು, ಸೊಸೆ ಮತ್ತು ದಾಸಿ. ಅವರು ಒಗ್ಗಟ್ಟಾಗಿ ಸಮ್ಮೋದ ದಿಂದ ಪ್ರಿಯವಾಗಿ ಒಟ್ಟಿಗಿದ್ದರು. ಬೋಧಿಸತ್ವನು "ನೀವು ಪಡೆದಂತೆ

ದಾನ ಕೊಡಿರಿ, ಶೀಲವನ್ನು ರಕ್ಷಿಸಿರಿ, ಉಪವಾಸಕರ್ಮ ಮಾಡಿರಿ, ಮರಣವನ್ನು ನೆನೆದು ನಿಮ್ಮ ಸಾಯುವಿಕೆಯನ್ನು ಚೆನ್ನಾಗಿ ಗಮನಿಸಿರಿ. ಜೀವಿಗಳಿಗೆಲ್ಲ ಮರಣ ನಿತ್ಯ, ಜೀವಿತ ಅನಿತ್ಯ. ಸರ್ವ ಸಂಸ್ಕಾರಗಳೂ ಅನಿತ್ಯವಾದವು. ಕ್ಷಯವಾಗುವುದು ಅವುಗಳ ಧರ್ಮ. ರಾತ್ರಿ ಹಗಲು ಅಪ್ರಮತ್ತರಾಗಿರಿ" ಎಂದು ಉಳಿದ ಐವರಿಗೆ ಬುದ್ಧಿವಾದ ಕೊಡುವನು. ಅವರು ಒಳ್ಳೆಯದೆಂದು ಆ ಬುದ್ಧಿವಾದವನ್ನು ಒಪ್ಪಿ ಅಪ್ರಮತ್ತರಾಗಿ ಮರಣದ ನೆನಪನ್ನು ಬೆಳೆಸುತ್ತಿದ್ದರು.

ಆಗ ಒಂದು ದಿವಸ ಬೋಧಿಸತ್ವನು ಮಗನೊಡನೆ ಹೊಲಕ್ಕೆ ಹೋಗಿ ಕೃಷಿ ಮಾಡುತ್ತಿದ್ದನು. ಮಗನು ಕಚಡವನ್ನು ಒಟ್ಟುಮಾಡಿ ಉರಿಸಿದನು. ಅಲ್ಲಿಗೆ ಸ್ವಲ್ಪ ದೂರದಲ್ಲಿ ಒಂದು ಹುತ್ತದಲ್ಲಿ ಹಾವಿತ್ತು. ಹೊಗೆ ಅದರ ಕಣ್ಣುಗಳನ್ನು ನೋಯಿಸಿತು. ಅದು ಕೋಪದಿಂದ ಹೊರಗೆ ಬಂದು, "ಇವನಿಂದ" ಎಂದು ನಾಲ್ಕು ಹಲ್ಲುಗಳನ್ನೂ ಊರಿ ಅವನನ್ನು ಕಚ್ಚಿತು. ಅವನು ಸತ್ತುಬಿದ್ದನು. ಬೋಧಿಸತ್ವನು ಅವನು ಸತ್ತುಬಿದ್ದುದನ್ನು ಕಂಡು, ಎತ್ತುಗಳನ್ನು ಬಿಟ್ಟುಬಂದು, ಅವನು ಸತ್ತುದನ್ನು ತಿಳಿದು, ಅವನನ್ನು ಎತ್ತಿ ಒಂದು ಮರದ ಬುಡದಲ್ಲಿ ಮಲಗಿಸಿ, ಮೈಮುಚ್ಚಿ, ಅಳಲಿಲ್ಲ, ಗೋಳಾಡಲಿಲ್ಲ. "ಒಡೆಯುವುದೇ ಧರ್ಮವಾದುದು ಒಡೆಯುವುದು. ಮರಣಧರ್ಮವಾದುದು ಮೃತವಾಯಿತು. ಸರ್ವ ಸಂಸ್ಕಾರಗಳೂ ಅನಿತ್ಯ, ಮರಣವಾಗತಕ್ಕವು" ಎಂದು ಅನಿತ್ಯಭಾವವನ್ನೇ ಗಮನಿಸಿ ಕೃಷಿಮಾಡಿದನು. ತನ್ನ ಹೊಲದ ಸಮೀಪದಲ್ಲಿ ಹೋಗುತ್ತಿದ್ದ ಒಬ್ಬ ಪಕ್ಕದವನನ್ನು ಕಂಡು, "ಅಯ್ಯಾ, ಮನೆಗೆ ಹೋಗುವೆಯ?" ಎಂದು ಕೇಳಿ, 'ಹೌದು' ಎನ್ನಲು, "ಹಾಗಾದರೆ ನಮ್ಮ ಮನೆಗೆ ಹೋಗಿ 'ಇಂದು ಹಿಂದಿನಂತೆ ಇಬ್ಬರಿಗೆ ಆಹಾರ ತರದೆ ಒಬ್ಬನಿಗೇ ಆಹಾರ ತಾ. ಮೊದಲು ಒಬ್ಬಳೇ ದಾಸಿ ಆಹಾರ ತರುತ್ತಿದ್ದಳು. ಇವತ್ತು ನಾಲ್ವರು ಜನರು ಶುದ್ಧವಸ್ತ್ರ ತಾಳಿ ಕೈಯಲ್ಲಿ ಗಂಧ ಹೂ ಹಿಡಿದು ಬರಲಿ' ಎಂದು ಬ್ರಾಹ್ಮಣಿಗೆ ತಿಳಿಸು" ಎಂದನು. ಅವನು ಒಳ್ಳೆಯದೆಂದು ಬ್ರಾಹ್ಮಣಿಗೆ ಹಾಗೇ ಹೇಳಿದನು.

"ಈ ಶಾಸನ ಕೊಟ್ಟವರಾರಯ್ಯ?"

"ಬ್ರಾಹ್ಮಣ, ಆರ್ಯೆ."

ಅವಳು 'ನನ್ನ ಮಗ ಸತ್ತ' ಎಂದು ತಿಳಿದಳು. ಅವಳು ಕಂಪಿಸಲೂ ಇಲ್ಲ. ಹೀಗೆ ಸುಭಾವಿತಚಿತ್ತೆಯಾಗಿ ಶುದ್ಧವಸ್ತ್ರವನ್ನು ತಾಳಿ, ಕೈಯಲ್ಲಿ ಗಂಧ ಹೂ ಹಿಡಿದು ಆಹಾರವನ್ನು ತೆಗೆಯಿಸಿಕೊಂಡು ಉಳಿದವರೊಡನೆ ಹೊಲಕ್ಕೆ ಬಂದಳು. ಒಬ್ಬರಾದರೂ ಅಳಲಿಲ್ಲ, ಗೋಳಾಡಲಿಲ್ಲ. ಬೋಧಿಸತ್ವನು ಮಗನು ಮಲಗಿದ್ದ ನೆರಳಿನಲ್ಲಿಯೇ ಕುಳಿತು ತಿಂದನು. ಊಟವಾದ ಮೇಲೆ ಎಲ್ಲರೂ ಕಟ್ಟಿಗೆಯನ್ನು ಎತ್ತಿ, ಅದನ್ನು ಚಿತೆಯ ಮೇಲೇರಿಸಿ ಗಂಧ ಪುಷ್ಪಗಳಿಂದ ಪೂಜಿಸಿ ಸುಟ್ಟರು. ಯಾರಿಗೂ ಒಂದು ಹನಿ ಕಣ್ಣೀರೂ ಆಗಲಿಲ್ಲ. ಎಲ್ಲರೂ ಮರಣದ ಸ್ಮೃತಿಯನ್ನು ಬೆಳೆಸಿದವರು.

ಅವರ ಶೀಲದ ತೇಜಸ್ಸಿನಿಂದ ಶಕ್ರನ ಆಸನ ಬಿಸಿಯಾಯಿತು. "ನನ್ನನ್ನು ಈ ಸ್ಥಾನದಿಂದ ಕದಲಿಸಬಯಸುವವರಾರು?" ಎಂದು ನೋಡಿಕೊಂಡು, ಅವರ ಗುಣತೇಜದಿಂದ ಬಿಸಿಯಾಯಿತೆಂದು ತಿಳಿದು, ಪ್ರಸನ್ನಮಾನಸನಾಗಿ, "ನಾನು ಇವರ ಬಳಿ ಹೋಗಿ ಸಿಂಹನಾದವನ್ನು ಕೂಗಿಸಿ, ಕಡೆಗೆ ಇವರ ಮನೆಯನ್ನು ಸಪ್ತರತ್ನಗಳಿಂದ ಪೂರ್ಣಮಾಡಿ ಬರುವುದು ಸಲ್ಲುವುದು" ಎಂದು ವೇಗವಾಗಿ ಅಲ್ಲಿಗೆ ಹೋಗಿ, ಸುಡುಗಾಡಿನ ಪಕ್ಕದಲ್ಲಿ ನಿಂತು, "ಏನು ಮಾಡುವಿರಿ?" ಎಂದನು.

"ಒಬ್ಬ ಮನುಷ್ಯನನ್ನು ಸುಡುವೆವು, ಸ್ವಾಮಿ."

"ನೀವು ಮನುಷ್ಯನನ್ನು ಸುಡುತ್ತಿಲ್ಲ. ಒಂದು ಮೃಗವನ್ನು ಕೊಂದು ಬೇಯಿಸುವಿರೆಂದು ಕಾಣುತ್ತದೆ."

"ಹಾಗಲ್ಲ, ಸ್ವಾಮಿ. ಮನುಷ್ಯನನ್ನೇ ಸುಡುವೆವು."

"ಹಾಗಾದರೆ ನಿಮಗೆ ವೈರಿಯಾದವನಾಗಿರಬೇಕು."

ಆಗ ಬೋಧಿಸತ್ವನು "ಇವನು ನನ್ನ ಔರಸಪುತ್ರ, ಸ್ವಾಮಿ; ವೈರಿಯಲ್ಲ" ಎಂದನು.

“ ಹಾಗಾದರೆ ನಿನಗೆ ಅಪ್ರಿಯಪುತ್ರನಾಗಿರಬೇಕು.”

“ ಅತಿ ಪ್ರಿಯಪುತ್ರ, ಸ್ವಾಮಿ.”

“ ಹಾಗಾದರೆ ಅಳುವುದಿಲ್ಲವೇಕೆ ?”

ಅವನು ಅಳದಿರುವುದಕ್ಕೆ ಕಾರಣವನ್ನು ತಿಳಿಸುತ್ತ ಮೊದಲ ಗಾಹೆ ಹೇಳಿದನು :

“ ಭೋಗಗಳು ಮುಗಿದವನು, ಸಾಯುವಾಗ, ಹಾವು ಹಳೆಯ ಚರ್ಮ ವನ್ನು ಹೇಗೋ ಹಾಗೆ, ಶರೀರವನ್ನು ಬಿಡುವನು.

“ ಸುಟ್ಟವನನ್ನು ಜ್ಞಾತಿಗಳ ಗೋಳು ಮುಟ್ಟದು. ಆದರಿಂದ ನಾನು ಶೋಕಿಸುವುದಿಲ್ಲ. ಅವನು ತನ್ನ ಗತಿಗೆ ಹೋದ.”

ಶಕ್ರನು ಬೋಧಿಸತ್ವನ ಮಾತು ಕೇಳಿ, “ ಅವನು ನಿನಗೇನಾಗ ಬೇಕು ?” ಎಂದು ಬ್ರಾಹ್ಮಣಿಯನ್ನು ಕೇಳಿದನು.

“ ಹತ್ತು ತಿಂಗಳು ಹೊಟ್ಟೆಯಲ್ಲಿ ಕಾಪಾಡಿ, ಮೊಲೆಹಾಲು ಕುಡಿಸಿ, ಕೈ ಕಾಲುಗಳನ್ನು ನಡಸಿ, ಬೆಳೆಸಿದ ನನ್ನ ಮಗ, ಸ್ವಾಮಿ.”

“ ಅಮ್ಮ, ತಂದೆಯು ಗಂಡಸಾದ್ದರಿಂದ ಅಳುವುದಿಲ್ಲ. ತಾಯ ಹೃದಯವೆಂಬುದು ಮೃದುವಾದುದು. ನೀನೇಕೆ ಅಳುವುದಿಲ್ಲ ?”

ಅವಳು ತಾನು ಅಳದಿರಲು ಕಾರಣ ಹೇಳುತ್ತ,

“ ಕರೆಯಿಸಿಕೊಳ್ಳದೆ ಇಲ್ಲಿಗೆ ಬಂದ, ಅಪ್ಪಣೆಯಿಲ್ಲದೆ ಇಲ್ಲಿಂದ ಹೋದ. ಹೇಗೆ ಬಂದನೋ ಹಾಗೆ ಹೋದ. ಇದಕ್ಕೇಕೆ ಗೋಳಾಟ ?

“ ಸುಟ್ಟವನನ್ನು ಜ್ಞಾತಿಗಳ ಗೋಳು ಮುಟ್ಟದು. ಆದರಿಂದ ನಾನು ಶೋಕಿಸುವುದಿಲ್ಲ. ಅವನು ತನ್ನ ಗತಿಗೆ ಹೋದ.”
ಎಂದು ಎರಡು ಗಾಹೆ ಹೇಳಿದಳು.

ಶಕ್ರನು ಬ್ರಾಹ್ಮಣಿಯ ಮಾತು ಕೇಳಿ, ತಂಗಿಯನ್ನು “ ಅಮ್ಮ, ನಿನಗೇನಾಗಬೇಕು, ಅವನು ? ” ಎಂದು ಕೇಳಿದನು.

“ ನನ್ನ ಅಣ್ಣ, ಸ್ವಾಮಿ.”

" ಅಮ್ಮ, ತಂಗಿಯೆಂಬವಳು ಅಣ್ಣನಲ್ಲಿ ಸ್ನೇಹವುಳ್ಳವಳು. ನೀನೇಕೆ ಅಳುವುದಿಲ್ಲ ? "

ಅವಳು ಕೂಡ ತಾನು ಅಳದಿರಲು ಕಾರಣ ತಿಳಿಸುತ್ತ

" ಅತ್ತರೆ ಕೃಶವಾಗುವೆನು. ಆದರಿಂದ ನನಗೇನು ಫಲ ? ಜ್ಞಾತಿಮಿತ್ರ ಸುಹೃದಯರಿಗೆ ನನ್ನಿಂದ ಹೆಚ್ಚು ದುಃಖವಾಗುವುದು.

" ಸುಟ್ಟವನನ್ನು ಜ್ಞಾತಿಗಳ ಗೋಳು ಮುಟ್ಟದು. ಆದರಿಂದ ನಾನು ಶೋಕಿಸುವುದಿಲ್ಲ. ಅವನು ತನ್ನ ಗತಿಗೆ ಹೋದ. "
ಎಂದು ಎರಡು ಗಾಹೆ ಹೇಳಿದಳು.

ಶಕ್ರನು ತಂಗಿಯ ಮಾತು ಕೇಳಿ, "ಅಮ್ಮ, ಅವನು ನಿನಗೇನಾಗಬೇಕು?" ಎಂದು ಹೆಂಡತಿಯನ್ನು ಕೇಳಿದನು.

" ನನ್ನ ಪತಿ, ಸ್ವಾಮಿ."

"ಸ್ತ್ರೀಯೆಂಬವಳು ಗಂಡ ಸತ್ತರೆ ಅನಾಥೆಯಾದ ವಿಧವೆಯಾಗುವಳು. ನೀನೇಕೆ ಅಳುವುದಿಲ್ಲ?"

ಅವಳು ಕೂಡ ತಾನು ಅಳದಿರುವ ಕಾರಣವನ್ನು ಹೇಳುತ್ತ

" ಹೋಗುತ್ತಿರುವ ಚಂದ್ರನಿಗಾಗಿ ಮಕ್ಕಳು ಅಳುವಂತೆಯೇ ಸತ್ತವರಿಗಾಗಿ ಶೋಕಿಸುವವರ ಸಂಪತ್ತು ಕೂಡ.

" ಸುಟ್ಟವನನ್ನು ಜ್ಞಾತಿಗಳ ಗೋಳು ಮುಟ್ಟದು. ಆದರಿಂದ ನಾನು ಶೋಕಿಸುವುದಿಲ್ಲ. ಅವನು ತನ್ನ ಗತಿಗೆ ಹೋದ. "
ಎಂದು ಎರಡು ಗಾಹೆ ಹೇಳಿದಳು.

ಶಕ್ರನು ಹೆಂಡತಿಯ ಮಾತುಕೇಳಿ, " ಅಮ್ಮ, ನಿನಗೇನಾಗಬೇಕು, ಇವನು ? " ಎಂದು ದಾಸಿಯನ್ನು ಕೇಳಿದನು.

"ನನ್ನ ಆರ್ಯ, ಸ್ವಾಮಿ."

"ನಿನ್ನನ್ನು ಇವನು ಪೀಡಿಸಿ, ಬಾಧಿಸಿ, ಗೋಳುಹುಯ್ದಿರಬೇಕು. ಅದರಿಂದ 'ಇವನು ಸತ್ತನು, ಒಳ್ಳೆಯದು' ಎಂದು ನೀನು ಅಳುವುದಿಲ್ಲ. ಅಲ್ಲವೆ ?"

" ಸ್ವಾಮಿ, ಹಾಗೆನ್ನಬೇಡ. ಇವನು ಅಂತಹವನಲ್ಲ. ನನ್ನ ಆರ್ಯ ಪುತ್ರನು. ಕ್ಷಾಂತಿ ಮೈತ್ರಿ ಅನುದಯೆಗಳಿಂದ ಸಂಪನ್ನನಾಗಿದ್ದನು. ಎದೆಯಲ್ಲಿ ಬೆಳೆಸಿದ ಮಗನಂತಿದ್ದನು."

" ಹಾಗಾದರೆ ನೀನು ಏಕೆ ಅಳುವುದಿಲ್ಲ? "

ಅವಳು ಕೂಡ ಅಳದಿರುವುದಕ್ಕೆ ಕಾರಣ ತಿಳಿಸುತ್ತ

" ಒಡೆದ ನೀರುಗಡಿಗೆಯನ್ನು ಪುನಃ ಕೂಡಿಸಲಾರರು. ಸತ್ತವರಿಗಾಗಿ ಅಳುವವರ ಸಂಪತ್ತೂ ಹಾಗೆಯೇ.

" ಸುಟ್ಟವನನ್ನು ಜ್ಞಾತಿಗಳ ಗೋಳು ಮುಟ್ಟದು. ಆದರಿಂದ ನಾನು ಶೋಕಿಸುವುದಿಲ್ಲ. ಅವನು ತನ್ನ ಗತಿಗೆ ಹೋದ. "
ಎಂದು ಎರಡು ಗಾಹೆ ಹೇಳಿದಳು.

ಶಕ್ರನು ಎಲ್ಲರ ಧರ್ಮಕತೆಯನ್ನೂ ಕೇಳಿ ಪ್ರಸನ್ನನಾಗಿ " ನೀವು ಅಪ್ರಮತ್ತರಾಗಿ ಮರಣದ ಸ್ಮೃತಿಯನ್ನು ಭಾವಿಸಿದವರು. ನೀವು ಇಂದಿನಿಂದ ಕೈಯಾರೆ ಕೆಲಸಮಾಡುವುದು ಬೇಡ. ನಾನು ದೇವರಾಜನಾದ ಶಕ್ರ. ನಾನು ನಿಮ್ಮ ಮನೆಯಲ್ಲಿ ಸಪ್ತರತ್ನಗಳಿಗೆ ಪರಿಮಿತಿಯಿಲ್ಲದಂತೆ ಮಾಡುವೆನು. ನೀವು ದಾನ ಕೊಡಿರಿ, ಶೀಲವನ್ನು ಕಾಪಾಡಿರಿ. ಉಪವಾಸವನ್ನು ಮಾಡಿರಿ. ಅಪ್ರಮತ್ತರಾಗಿರಿ" ಎಂದು ಅವರಿಗೆ ಬುದ್ಧಿವಾದ ಕೊಟ್ಟು ಮನೆಯಲ್ಲಿ ಪರಿಮಿತಿಯಿಲ್ಲದೆ ಧನ ತುಂಬಿ ಹೋದನು.

## ಬಿಸಪುಷ್ಪ ಜಾತಕ (೩೯೨)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಬೋಧಿಸತ್ವನು ಒಂದಾನೊಂದು ಕಾಶಿಯ ಹಳ್ಳಿಯೊಳಗೆ ಬ್ರಾಹ್ಮಣ ಕುಲದಲ್ಲಿ ಹುಟ್ಟಿ, ವಯಸ್ಸಾಗಲು ತಕ್ಷಶಿಲೆಯಲ್ಲಿ ಶಿಲ್ಪಗಳನ್ನು ಕೈಗತ ಮಾಡಿಕೊಂಡು, ಅನಂತರ ಋಷಿಪ್ರವ್ರಜ್ಯವನ್ನು ಪ್ರವ್ರಜಿಸಿ ಒಂದು ಪದ್ಮಸರಸ್ಸಿನ ಬಳಿಯಲ್ಲಿ ವಾಸಿಸುತ್ತ, ಒಂದು ದಿನ ಸರಸ್ಸಿಗೆ ಇಳಿದು ಚೆನ್ನಾಗಿ ಅರಳಿದ ಪದ್ಮವನ್ನು ಆಘ್ರಾಣಿಸುತ್ತ ನಿಂತನು.

ಆಗ ದೇವಕನ್ನಿಕೆಯೊಬ್ಬಳು ಮರದ ಪೊಟರೆಯಲ್ಲಿ ನಿಂತು ಅವನನ್ನು ಬೆದರಿಸುತ್ತ ಮೊದಲ ಗಾಹೆ ಹೇಳಿದಳು :

"ನೀನು ಮೂಸುವ ಜಲಜವನ್ನು ನಿನಗೆ ಯಾರೂ ಕೊಟ್ಟುದಿಲ್ಲ. ಇದು ಒಂದು ತೆರದ ಕಳ್ಳತನ. ಮಾರಿಷ, ನೀನು ವಾಸನೆಗಳ್ಳ."

ಆಗ ಬೋಧಿಸತ್ವನು ಎರಡನೆಯ ಗಾಹೆ ಹೇಳಿದನು :

"ನಾನು ಕೊಂಡೊಯ್ಯುವುದಿಲ್ಲ, ಮುರಿಯುವುದಿಲ್ಲ. ದೂರದಿಂದ ಹೂವನ್ನು ಮೂಸುವೆನು. ನನ್ನನ್ನು ಏಕಾಗಿ ವಾಸನೆಗಳ್ಳನೆನ್ನುವೆ ?"

ಆ ಹೊತ್ತಿನಲ್ಲಿ ಒಬ್ಬ ಪುರುಷನು ಆ ಸರಸ್ಸಿನಲ್ಲಿ ತಾವರೆದಂಟು ಗಳಿಗಾಗಿ ಅಗೆದು ಪುಂಡರೀಕಗಳನ್ನು ಮುರಿಯುತ್ತಿದ್ದನು. ಬೋಧಿ ಸತ್ವನು ಅವನನ್ನು ಕಂಡು, "ದೂರ ನಿಂತು ಮೂಸುವವನನ್ನು ಕಳ್ಳ ನೆಂದೆಯಲ್ಲ! ಈ ಮನುಷ್ಯನಿಗೇಕೆ ಹೇಳುವುದಿಲ್ಲ ?" ಎಂದು ಅವಳೊ ಡನೆ ನುಡಿಯುತ್ತ ಮೂರನೆಯ ಗಾಹೆ ಹೇಳಿದನು :

"ತಾವರೆ ದಂಟುಗಳನ್ನು ಅಗೆದು ಹೂಗಳನ್ನು ಮುರಿದು ಕರ್ಕಶ ಕಾರ್ಯಮಾಡುವ ಇವನನ್ನು ಏಕೆ ಮಾತನಾಡಿಸುವುದಿಲ್ಲ ?"

ಆಗ, ಅವನನ್ನು ಮಾತನಾಡಿಸದಿರಲು ಕಾರಣವನ್ನು ತಿಳಿಸುತ್ತ ದೇವತೆಯು ನಾಲ್ಕೈದನೆಯ ಗಾಹೆಗಳನ್ನು ಹೇಳಿದಳು :

"ಕರ್ಕಶ ಕೆಲಸಮಾಡುವವನು ದಾದಿಯ ಬಟ್ಟೆಯಂತೆ ಹೊಲಸಾದ ವನು. ಅವನೊಡನೆ ನನಗೆ ಮಾತಿಲ್ಲ. ನಿನಗೆ ಹೇಳುವುದು ಅರ್ಹವೆಂಬೆನು.

"ಕೊಳೆಯಿಲ್ಲದ ಪುರುಷನಲ್ಲಿ, ಸದಾ ಶುಚಿಯನ್ನು ಹುಡುಕುವವನಲ್ಲಿ, ಕೂದಲು ತುದಿಯಷ್ಟು ಪಾಪ ಕೂಡ ದೊಡ್ಡ ಮೋಡದಷ್ಟಾಗಿ ಕಾಣುವುದು."

ಹೀಗೆ ಅವಳು ಬೆದರಿಸಲು ಬೋಧಿಸತ್ವನು ಬೆದರಿ ಆರನೆಯ ಗಾಹೆ ಹೇಳಿದನು :

"ಯಕ್ಷಿಣಿ, ನೀನು ನನ್ನನ್ನು ಚೆನ್ನಾಗಿ ಬಲ್ಲೆ. ನಿನಗೆ ನನ್ನಲ್ಲಿ ಅನುಕಂಪ ವುಂಟು. ಇಂತಹದನ್ನು ಪುನಃ ಕಂಡರೆ ಹೋಗಲಾಡಿಸು."

ಆಗ ದೇವತೆಯು ಅವನಿಗೆ ಏಳನೆಯ ಗಾಹೆ ಹೇಳಿದಳು :




ದರ್ಭಪುಷ್ಪ ಜಾತಕ (೪೦೦) [ಪುಟ ೪೭

"ನಾನು ನಿನ್ನನ್ನು ಸೇವಿಸುತ್ತಿಲ್ಲ. ನಾನು ನಿನ್ನ ಭೃತ್ಯಳಲ್ಲ. ಸುಗತಿಗೆ ಹೋಗುವುದು ಯಾವುದರಿಂದ ಎಂದು ನೀನೇ ತಿಳಿದುಕೊ, ಭಿಕ್ಷು."

ಹೀಗೆ ಅವಳು ಅವನಿಗೆ ಬುದ್ಧಿವಾದ ಕೊಟ್ಟು ತನ್ನ ವಿಮಾನವನ್ನು ಹೊಕ್ಕಳು. ಬೋಧಿಸತ್ವನು ಧ್ಯಾನವನ್ನು ಜನಿಯಿಸಿಕೊಂಡು ಬ್ರಹ್ಮ ಲೋಕದಲ್ಲಿ ಹುಟ್ಟಿದನು.

## ಧೂಮಕಾರಿ ಜಾತಕ (೪೧೩)

ಹಿಂದೆ, ಕುರುರಾಷ್ಟ್ರದಲ್ಲಿ ಇಂದ್ರಪ್ರಸ್ಥನಗರದಲ್ಲಿ ಯುಧಿಷ್ಠಿರ ಗೋತ್ರದ ಧನಂಜಯನೆಂಬ ಕೌರವ್ಯರಾಜನು ರಾಜ್ಯವಾಳುತ್ತಿದ್ದನು. ಆಗ, ಬೋಧಿಸತ್ವನು ಅವನ ಪುರೋಹಿತಕುಲದಲ್ಲಿ ಹುಟ್ಟಿ, ವಯಸ್ಸಾಗಲು ತಕ್ಷಶಿಲೆಯಲ್ಲಿ ಸರ್ವಶಿಲ್ಪಗಳನ್ನೂ ಕೈವಶಮಾಡಿಕೊಂಡು, ಇಂದ್ರಪ್ರಸ್ಥಕ್ಕೆ ಬಂದು, ತಂದೆ ಸತ್ತನಂತರ ಪುರೋಹಿತಸ್ಥಾನವನ್ನು ಪಡೆದು, ರಾಜನಿಗೆ ಅರ್ಥ ಧರ್ಮಗಳನ್ನು ಅನುಶಾಸನೆ ಮಾಡುವವನಾದನು. ವಿಧೂರಪಂಡಿತನೆಂದು ಅವನಿಗೆ ಹೆಸರಾಯಿತು.

ಆಗ, ಧನಂಜಯರಾಜನು ಹಳೆಯ ಯೋಧರನ್ನು ಲೆಕ್ಕಕ್ಕೆ ತಾರದೆ ಹೊಸಹೊಸ ಜನರನ್ನೇ ಕೂಡಿಸಿಕೊಂಡನು. ಅವನು ಗಡಿನಾಡಿನಲ್ಲಿ ಯುದ್ಧಕ್ಕೆ ಹೋದಾಗ, "ಹೊಸಬರಿಗೆ ಗೊತ್ತು", "ಹಳಬರಿಗೆ ಗೊತ್ತು" ಎಂದು ಹಳೆಯವರಾಗಲಿ ಹೊಸದಾಗಿ ಬಂದವರಾಗಲಿ ಯುದ್ಧ ಮಾಡಲಿಲ್ಲ. ರಾಜನು ಸೋತು ಇಂದ್ರಪ್ರಸ್ಥಕ್ಕೆ ಹಿಂದಿರುಗಿ ಬಂದು, "ಹೊಸಬರನ್ನು ಕೂಡಿಸಿಕೊಂಡುದರಿಂದ ನಾನು ಸೋತೆ" ಎಂದು ಚಿಂತಿಸಿದನು.

ಅವನು ಒಂದು ದಿನ "ಏನು? ಹೊಸದಾಗಿ ಬಂದವರನ್ನು ಕೂಡಿಸಿ ಸೋತವನು ನಾನು ಮಾತ್ರವೋ? ಅಥವಾ ಹಿಂದೆ ಸೋತ ರಾಜರಾರಾದರೂ ಉಂಟೊ? ವಿಧೂರಪಂಡಿತನನ್ನು ಕೇಳುವೆನು" ಎಂದು ಚಿಂತಿಸಿ, ಅವನು ರಾಜಸೇವೆಗೆ ಬಂದು ಕುಳಿತಾಗ ಅದನ್ನು ಕೇಳಿದನು.

ಅವನು ಅದನ್ನು ಕೇಳಲು ಕಾರಣವನ್ನು ತಿಳಿಸುತ್ತ ಗುರುವು ಅರ್ಧಗಾಹೆ ಹೇಳಿದನು.

" ಧರ್ಮಕಾಮನಾದ ಯುಧಿಷ್ಠಿರರಾಜನು ವಿಧೂರನನ್ನು ಕೇಳಿದನು : ಬಹುವಾಗಿ ಶೋಕಿಸುವವನನ್ನು ಬಲ್ಲೆಯು, ಬ್ರಾಹ್ಮಣ ?' ಎಂದು."

ಅದನ್ನು ಕೇಳಿ ಬೋಧಿಸತ್ವನು, " ಮಹಾರಾಜ, ನಿನ್ನ ಶೋಕ ವೆಂತಹದು ! ಹಿಂದೆ, ಧೂಮಕಾರಿಯೆಂಬ ಅಜಪಾಲ ಬ್ರಾಹ್ಮಣನು ಮಹಾ ಅಜಯೂಥವನ್ನು ಒಡಗೊಂಡು ಅರಣ್ಯದಲ್ಲಿ ವ್ರಜಮಾಡಿ ಅಲ್ಲಿ ಅಜ ಗಳನ್ನು ನಿಲ್ಲಿಸಿ, ಬೆಂಕಿ ಹೊಗೆಗಳನ್ನು ಮಾಡಿ, ಅಜಯೂಥವನ್ನು ಜಾಗೃತ ನಾಗಿ ಕಾಪಾಡುತ್ತ, ಹಾಲು ಮೊದಲಾದುವನ್ನು ಸವಿಯುತ್ತ ವಾಸಿಸಿದನು. ಅವನು, ಅಲ್ಲಿಗೆ ಒಂದು ಸಲ ಬಂದ ಸುವರ್ಣ ವರ್ಣದ ಶರಭಗಳನ್ನು ಕಂಡು, ಅವುಗಳಲ್ಲಿ ಸ್ನೇಹಮಾಡಿ, ಅಜಗಳನ್ನು ಲಕ್ಷಿಸದೆ, ಅಜಗಳ ಸತ್ಕಾರವನ್ನು ಶರಭಗಳಿಗೆ ಮಾಡಿ, ಶರತ್ಕಾಲದಲ್ಲಿ ಶರಭಗಳು ಓಡಿ ಹಿಮ ವಂತಕ್ಕೆ ಹೋಗಲು, ಅಜಗಳು ನಾಶವಾಗಲು, ಶರಭಗಳನ್ನು ಕಾಣದೆ, ಶೋಕದಿಂದ ಪಾಂಡುರೋಗಿಯಾಗಿ ಸತ್ತನು. ಅವನು ಆಗಂತುಕರನ್ನು ಕೂಡಿಸಿಕೊಂಡು ನಿನಗೆ ನೂರರಷ್ಟು, ಸಾವಿರದಷ್ಟು, ಶೋಕಪಟ್ಟು ಕೋಟಲೆಪಟ್ಟು ವಿನಾಶವಾದನು" ಎಂದು ಈ ಉದಾಹರಣೆಯನ್ನು ತಂದು ತೋರಿಸಲು ಹೀಗೆಂದನು :

" ಬ್ರಹ್ಮತೇಜಸ್ಸಿನ ಬ್ರಾಹ್ಮಣನಾದ ವಾಸಿಷ್ಠನು ಅಜಯೂಥದೊಡನೆ ವನದಲ್ಲಿ ವಾಸಮಾಡುತ್ತ, ರಾತ್ರಿಹಗಲು ಮರೆಯದೆ ಹೊಗೆಮಾಡುತ್ತಿದ್ದನು.

" ಅವನ ಆ ಹೊಗೆಯ ವಾಸನೆಯಿಂದ, ಸೊಳ್ಳೆ ಕಚ್ಚುತ್ತಿದ್ದ ಶರಭಗಳು ಧೂಮಕಾರಿಯ ಬಳಿಯಲ್ಲಿ ವರ್ಷಾವಾಸಕ್ಕೆ ಬಂದವು.

" ಶರಭಗಳಲ್ಲಿ ಮನಸ್ಸಿಟ್ಟು ಅಜಗಳನ್ನು ಅವನು ನೆನೆಯಲಿಲ್ಲ. ಅವು ಬಂದು ಹೋಗುವುವು. ಅದರಿಂದ ಆ ಅಜಗಳು ವಿನಾಶವಾದುವು.

" ಶರತ್ಕಾಲದಲ್ಲಿ, ಶರಭಗಳು ವನದಲ್ಲಿ ಸೊಳ್ಳೆಗಳು ಹೋಗಲು ಗಿರಿದುರ್ಗ ಗಳನ್ನೂ ಹರಿವ ನದಿಗಳನ್ನೂ ಪ್ರವೇಶಿಸಿದುವು.

" ಶರಭಗಳು ಹೋದುದನ್ನೂ ಅಜಗಳು ನಾಶವಾದುದನ್ನೂ ಕಂಡು ಬ್ರಾಹ್ಮಣನು ಕೃಶನಾಗಿ ವಿವರ್ಣನಾಗಿ ಪಾಂಡುರೋಗಿಯಾದನು.

"ಹೀಗೆ ತನ್ನವರನ್ನು ನಿರಾಕರಿಸಿ ಆಗಂತುಕರನ್ನು ಪ್ರಿಯಮಾಡಿದರೆ, ಅವನು ಬ್ರಾಹ್ಮಣ ಧೂಮಕಾರಿಯಂತೆ ಬಹು ಶೋಕಿಸುವನು. ''

ಹೀಗೆ ಮಹಾಸತ್ವನು ರಾಜನನ್ನು ಸಂತೈಸಲು ಹೇಳಿದನು. ಅವನು ಕೂಡ ಸಂತೈಸಲ್ಪಟ್ಟು ಅವನಿಗೆ ಪ್ರಸನ್ನನಾಗಿ ಬಹು ಧನವನ್ನು ಕೊಟ್ಟನು. ಅಂದಿನಿಂದ ತನ್ನವರನ್ನೇ ಕೂಡಿಸಿಕೊಂಡು ದಾನಾದಿ ಪುಣ್ಯಗಳನ್ನು ಮಾಡಿ, ಸ್ವರ್ಗಪರಾಯಣನಾದನು.

## ಕಾತ್ಯಾಯನಿ ಜಾತಕ (೪೧೭)

ಹಿಂದೆ, ವಾರಣಾಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿರಲು, ಆಚಾರಸಂಪನ್ನನಾದ ಕುಲಪುತ್ರನೊಬ್ಬನು ತಂದೆ ಸಾಯಲು ತಾಯನ್ನು ಕಾಪಾಡುತ್ತ, ಮುಖ ತೊಳೆಯುವುದು, ಹಲ್ಲುಜ್ಜುವ ಕಡ್ಡಿ ಕೊಡುವುದು, ಸ್ನಾನಕ್ಕೆ ನೀರು ಕೊಡುವುದು, ಕಾಲು ತೊಳೆಯುವುದು ಮೊದಲಾದ ಸೇವಾಕರ್ಮಗಳಿಂದಲೂ ಗಂಜಿ ಅನ್ನ ಮೊದಲಾದುವುಗಳಿಂದಲೂ ತಾಯಿಯನ್ನು ಪಾಲಿಸುತ್ತಿದ್ದನು.

ಆಗ ತಾಯಿಯು " ಅಪ್ಪ, ಗೃಹವಾಸಿಗಳ ಇತರ ಕೃತ್ಯಗಳುಂಟು. ಒಂದು ಸಮಜಾತಕಕುಲದಿಂದ ಕುಮಾರಿಯನ್ನು ಗ್ರಹಿಸು. ಅವಳು ನನ್ನನ್ನು ಪೋಷಿಸುವಳು. ನೀನೂ ನಿನ್ನ ಕೆಲಸ ಮಾಡಬಹುದು " ಎಂದಳು.

" ಅಮ್ಮ, ನಾನು ನನ್ನ ಹಿತಸುಖಗಳಿಗಾಗಿ ನಿನ್ನ ಸೇವೆ ಮಾಡುವೆನು. ಬೇರೆ ಯಾರು ಹೀಗೆ ಸೇವೆ ಮಾಡಿಯಾರು? "

" ಕುಲವರ್ಧನಕರ್ಮವೆಂಬುದನ್ನು ಮಾಡಬೇಕಲ್ಲಪ್ಪ. '

" ನನಗೆ ಮನೆಯ ವಾಸ ಗುರಿಯಲ್ಲ. ನಾನು ನಿನ್ನನ್ನು ಸೇವಿಸಿ ನಿನ್ನನ್ನು ದಹಿಸಿದನಂತರ ಪರಿವ್ರಜಿಸುವೆನು."

ಅವನ ತಾಯಿಯು ಪುನಃ ಪುನಃ ಬೇಡಿದರು ಕೂಡ, ಅವನು ಒಪ್ಪದಿದ್ದರು ಕೂಡ, ಅವನ ಇಚ್ಛೆಯನ್ನು ತೆಗೆದುಕೊಳ್ಳದೆ ಸಮಜಾತಕ ಕುಲದಿಂದ ಹುಡುಗಿಯನ್ನು ತಂದಳು. ಅವನು ತಾಯಿಯನ್ನು ವಿರೋಧಿಸದೆ ಅವಳೊಡನೆ ವಾಸಮಾಡಿದನು. ಅವಳು ಕೂಡ " ನನ್ನ ಸ್ವಾಮಿ ಮಹತ್ತಾದ ಉತ್ಸಾಹದಿಂದ ತಾಯನ್ನು ಸೇವಿಸುವನು. ನಾನೂ ಅವಳನ್ನು ಸೇವಿಸುವೆನು " ಎಂದು ಚಿಂತಿಸಿ ಸತ್ಕಾರದಿಂದ ಸೇವಿಸಿದಳು. ಅವನು " ಇವಳು ನನ್ನ ತಾಯನ್ನು ಸತ್ಕಾರದಿಂದ ಸೇವಿಸುವಳು " ಎಂದು, ಅಂದಿನಿಂದ ಸಿಕ್ಕಿಸಿಕ್ಕಿದ ರುಚಿತಿಂಡಿಗಳನ್ನು ಅವಳಿಗೆ ಕೊಡುವನು.

ಅವಳು ಅನಂತರ " ಇವನು ಸಿಕ್ಕಿಸಿಕ್ಕಿದ ರುಚಿತಿಂಡಿಗಳನ್ನು ನನಗೇ ಕೊಡುವನು. ತಾಯನ್ನು ತೊಲಗಿಸಲು ಇವನು ಬಯಸುತ್ತಿರಬೇಕು. ಅವಳನ್ನು ತೊಲಗಿಸುವ ಉಪಾಯ ಮಾಡುವೆನು " ಎಂದು, ಸರಿಯಾಗಿ ತಿಳಿಯದೆ, ಒಂದು ದಿವಸ " ಸ್ವಾಮಿ, ನೀನು ಹೊರಗೆ ಹೋಗಲು ನಿನ್ನ ತಾಯಿ ನನ್ನ ಮೇಲೆ ಸಿಟ್ಟಾಗುವಳು " ಎಂದಳು. ಅವನು ಸುಮ್ಮನಿದ್ದನು. " ಈ ಮುದುಕಿಯನ್ನು ಕೆರಳಿಸಿ ಮಗನಿಗೆ ಪ್ರತಿಕೂಲವಾಗಿ ಮಾಡುವೆನು " ಎಂದು, ಅಂದಿನಿಂದ ಗಂಜಿ ಕೊಡುವಾಗ ಅತ್ಯುಷ್ಣವಾಗಿಯೋ ಅತಿಶೀತವಾಗಿಯೋ, ಅತಿ ಉಪ್ಪಾಗಿಯೋ ಉಪ್ಪಿಲ್ಲದೆಯೋ ಕೊಡುವಳು. " ಅಮ್ಮ, ಅತಿ ಬಿಸಿ, ಅತಿ ಉಪ್ಪು" ಎಂದರೆ, ಪೂರಾ ತಣ್ಣೀರು ಸುರಿಯುವಳು. ಪುನಃ " ಅತಿ ತಣ್ಣಗೆ, ಉಪ್ಪೇ ಇಲ್ಲ" ಎಂದರೆ, " ಈಗತಾನೆ ' ಅತಿ ಬಿಸಿ ಅತಿ ಉಪ್ಪು' ಎಂದೆ. ನಿನ್ನನ್ನು ಯಾರು ಸಂತೋಷಪಡಿಸಬಲ್ಲರು " ಎಂದು ಮಹಾಶಬ್ದ ಮಾಡುವಳು. ಸ್ನಾನದ ನೀರನ್ನು ಕೂಡ ಅತಿ ಉಷ್ಣಮಾಡಿ ಬೆನ್ನಮೇಲೆ ಚೆಲ್ಲುವಳು. " ಅಮ್ಮ, ಬೆನ್ನು ಸುಡುತ್ತದೆ " ಎಂದರೆ, ಪೂರ ತಣ್ಣೀರು ಚೆಲ್ಲುವಳು. " ಅತಿ ತಣ್ಣಗಾಯಿತಮ್ಮ" ಎಂದರೆ, " ಈಗ ತಾನೆ ಅತಿ ಬಿಸಿ ಎಂದು ಹೇಳಿ ಪುನಃ ಅತಿ ಶೀತವೆಂದು ಕೂಗುವೆ. ಈ ಅವಮಾನ ಯಾರು

ಸಹಿಸಬಲ್ಲರು !'' ಎಂದು ಪಕ್ಕದವರಿಗೆ ಹೇಳುವಳು. "ಅಮ್ಮ, ನನ್ನ ಹಾಸಿಗೆಯಲ್ಲಿ ಬಹು ತಿಗಣೆ" ಎಂದರೆ, ಹಾಸಿಗೆಯನ್ನು ಕೊಂಡುಹೋಗಿ ಅದರ ಮೇಲೆ ತನ್ನ ಹಾಸಿಗೆಯನ್ನು ಬಡಿದು, "ಒದರಿದ್ದೇನೆ" ಎಂದು ತಂದು ತಿಳಿಸುವಳು. ಮುದುಕಿಯು ಮೊದಲಿಗಿಂತ ಎರಡರಷ್ಟು ತಿಗಣೆಗಳಿಂದ ಕಚ್ಚಲ್ಪಟ್ಟು, ರಾತ್ರಿಯೆಲ್ಲ ಕುಳಿತುಕೊಂಡೇ ಕಳೆದು, "ಅಮ್ಮ, ರಾತ್ರಿಯೆಲ್ಲ ತಿಗಣೆ ಕಚ್ಚಿತು" ಎನ್ನುವಳು. ಇತರಳು "ನಿನ್ನೆ ನಿನ್ನ ಹಾಸಿಗೆ ಒದರಿದೆ, ಮೊನ್ನೆ ಒದರಿದೆ. ಇವಳ ಕೆಲಸವನ್ನೆಲ್ಲ ನೀಸಬಲ್ಲವರಾರು?" ಎಂದು ಪ್ರತಿಹೇಳಿ, "ಈಗ ಮಗನನ್ನು ಬೇಸರಗೊಳಿಸುವೆನು" ಎಂದು, ಅಲ್ಲಲ್ಲೆ ಶ್ಲೇಷ್ಮ ಶಿಂಬಳ ನರೆಗೂದಲುಗಳನ್ನು ಚೆಲ್ಲಿ, "ಯಾರು ಮನೆಯೆಲ್ಲವನ್ನೂ ಅಶುಚಿಮಾಡುವವರು?" ಎಂದರೆ, "ನಿನ್ನ ತಾಯಿ ಹೀಗೆ ಮಾಡುವಳು. ಮಾಡಬೇಡವೆಂದರೆ ಜಗಳವಾಡುವಳು. ನಾನು ಇಂತಹ ಮಾಟಗಾತಿಯೊಡನೆ ಒಂದೇ ಮನೆಯಲ್ಲಿ ವಾಸಮಾಡಲಾರೆ. ಇವಳನ್ನಾಗಲಿ ನನ್ನನ್ನಾಗಲಿ ಮನೆಯಲ್ಲಿ ವಾಸಮಾಡಗೊಡಿಸು" ಎಂದಳು. ಅವನು ಅವಳ ಮಾತನ್ನು ಕೇಳಿಕೊಂಡು "ತಾಯಿಯದೇ ದೋಷ" ಎಂದು, "ಅಮ್ಮ, ನೀನು ನಿತ್ಯ ಈ ಮನೆಯಲ್ಲಿ ಕಲಹಮಾಡುವೆ. ಇಲ್ಲಿಂದ ಹೊರಟು ಬೇರೆ ಮನಸ್ಸು ಬಂದ ಕಡೆ ವಾಸಿಸು" ಎಂದು ತಾಯಿಗೆಂದನು. ಅವಳು ''ಒಳ್ಳೆಯದು'' ಎಂದು ಅಳುತ್ತ ಹೊರಟು ಒಂದು ಮಿತ್ರಕುಲವನ್ನು ಆಶ್ರಯಿಸಿ ಕೂಲಿ ಮಾಡಿ ದುಃಖದಿಂದ ಜೀವಿಸುತ್ತಿದ್ದಳು.

ಅತ್ತೆ ಹೊರಟನಂತರ ಸೊಸೆಗೆ ಗರ್ಭವಾಯಿತು. ಅವಳು "ನಿನ್ನ ಮಾಟಗಾತಿ ಮನೆಯಲ್ಲಿ ವಾಸಮಾಡುತ್ತಿದ್ದುದರಿಂದ ಗರ್ಭವನ್ನೂ ಪಡೆಯಲಿಲ್ಲ. ಈಗ ಪಡೆದೆನು" ಎಂದು ಗಂಡನಿಗೂ ನೆರೆಯವರಿಗೂ ಹೇಳುತ್ತ ಹೊರಟಳು. ಅನಂತರ ಮಗನು ಹುಟ್ಟಲು, "ನಿನ್ನ ತಾಯಿ ಮನೆಯಲ್ಲಿದ್ದುದರಿಂದ ಮಗನನ್ನು ಪಡೆಯಲಿಲ್ಲ. ಈಗ ಪಡೆದೆನು. ಇದರಿಂದ ಅವಳ ಮಾಟವನ್ನು ತಿಳಿ" ಎಂದಳು.

ತಾಯಿ "ನನ್ನನ್ನು ಹೊರಗೊಗೆದ ಕಾಲದಲ್ಲಿ ಮಗನನ್ನು ಪಡೆದರು" ಎಂದು ಕೇಳಿ, "ಲೋಕದಲ್ಲಿ ಧರ್ಮ ಸತ್ತೇ ಹೋಗಿರಬೇಕು.

ಧರ್ಮ ಸಾಯದಿದ್ದರೆ ತಾಯನ್ನು ಬಡಿದೋಡಿಸಿದವರು ಪುತ್ರನನ್ನು ಪಡೆಯುತ್ತಿರಲಿಲ್ಲ, ಸುಖವಾಗಿ ಜೀವಿಸುತ್ತಿರಲಿಲ್ಲ. ಧರ್ಮಕ್ಕೆ ಪಿಂಡ ಕೊಡುವೆನು" ಎಂದು ಅವಳು ಒಂದು ದಿವಸ ಎಳ್ಳುಹಿಟ್ಟನ್ನೂ ಅಕ್ಕಿಯನ್ನೂ ಅಡಿಗೆ ತಪ್ಪಲೆಯನ್ನೂ ಸೌಟನ್ನೂ ಕೊಂಡು ಹಸಿ ಶ್ಮಶಾನಕ್ಕೆ ಹೋಗಿ ಮೂರು ಮನುಷ್ಯರ ತಲೆಗಳಿಂದ ಒಲೆಮಾಡಿ ಬೆಂಕಿ ಉರಿಯಿಸಿ ನೀರಿಗಿಳಿದು ತಲೆಗೆ ಸ್ನಾನಮಾಡಿ, ಬಟ್ಟೆಯನ್ನು ತೊಳೆದು ಒಲೆಯಿರುವಲ್ಲಿಗೆ ಬಂದು ತಲೆಗೂದಲನ್ನು ಬಿಚ್ಚಿ ಅಕ್ಕಿಯನ್ನು ತೊಳೆಯತೊಡಗಿದಳು.

ಆಗ ಬೋಧಿಸತ್ವನು ದೇವರಾಜನಾದ ಶಕ್ರನಾಗಿದ್ದನು. ಬೋಧಿಸತ್ವನು ಅಪ್ರಮತ್ತನಾಗಿದ್ದನು. ಅವನು ಆ ವೇಳೆಯಲ್ಲಿ ಲೋಕವನ್ನು ಅವಲೋಕಿಸುತ್ತ ಅವಳು ದುಃಖಗೊಂಡು "ಧರ್ಮ ಸತ್ತಿತು" ಎಂದುಕೊಂಡು ಧರ್ಮಕ್ಕೆ ಪಿಂಡ ಕೊಡಬಯಸುವುದನ್ನು ಕಂಡು, "ಇಂದು ನನ್ನ ಬಲವನ್ನು ಕಾಣಿಸುವೆನು" ಎಂದು ಬ್ರಾಹ್ಮಣವೇಷದಿಂದ ಮಹಾಮಾರ್ಗದಲ್ಲಿ ನಡೆಯುವನಂತಾಗಿ ಅವಳನ್ನು ಕಂಡು ಮಾರ್ಗದಿಂದ ದಾಟಿ ಅವಳ ಬಳಿ ನಿಂತು, "ಅಮ್ಮ, ಶ್ಮಶಾನದಲ್ಲಿ ಆಹಾರವನ್ನು ಬೇಯಿಸುವುದೆಂಬುದಿಲ್ಲ. ನೀನು ಈ ಪಕ್ವವಾದ ತಿಲೋದನದಿಂದ ಏನು ಮಾಡುವೆ?" ಎಂದು ಮಾತನಾಡುತ್ತ ಮೊದಲ ಗಾಹೆ ಹೇಳಿದನು:

"ಕಾತ್ಯಾಯನಿ, ಬಿಳಿಯ ಬಟ್ಟೆಯುಟ್ಟು ಶುಚಿಯಾಗಿ ಒದ್ದೆ ಕೂದಲಿನಲ್ಲಿ ಮಡಕೆಯಲ್ಲಿ ಬೇಯಿಸುತ್ತ ಎಳ್ಳುಹಿಟ್ಟನ್ನೂ ಅಕ್ಕಿಯನ್ನೂ ತೊಳೆಯುವೆಯೇಕೆ? ಯಾರಿಗಾಗಿ ಈ ತಿಲೋದನ?"

ಅವಳು ಅವನಿಗೆ ತಿಳಿಸುತ್ತ ಎರಡನೆಯ ಗಾಹೆ ಹೇಳಿದಳು:

"ಬ್ರಾಹ್ಮಣ, ತಿಲೋದನವನ್ನು ಚೆನ್ನಾಗಿ ಬೇಯಿಸುವುದು ಊಟಕ್ಕಾಗಿ ಅಲ್ಲ. ಧರ್ಮ ಸತ್ತಿತು. ಅದಕ್ಕೆ ನಾನು ಶ್ಮಶಾನ ಮಧ್ಯದಲ್ಲಿ ಹೆಚ್ಚಾದ ಅನ್ನವನ್ನು ಮಾಡುತ್ತೇನೆ."

ಆಗ ಶಕ್ರನು ಮೂರನೆಯ ಗಾಹೆ ಹೇಳಿದನು:

" ಯೋಚಿಸಿ ಕೆಲಸಮಾಡು, ಕಾತ್ಯಾಯನಿ. ಧರ್ಮ ಸತ್ತಿತೆಂದು ನಿನಗೆ ಹೇಳಿದವರಾರು ? ಸಾವಿರ ಕಣ್ಣುಳ್ಳ ಅತುಲಾನುಭಾವವಾದ ಶ್ರೇಷ್ಠ ಧರ್ಮವು ಎಂದಿಗೂ ಸಾಯದು."

ಅವನ ಮಾತು ಕೇಳಿ ಅವಳು ಎರಡು ಗಾಹೆ ಹೇಳಿದಳು :

" ಬ್ರಾಹ್ಮಣ, ನನಗೆ ದೃಢವಾದ ಪ್ರಮಾಣವುಂಟು. ಧರ್ಮ ಸತ್ತಿತು. ನನಗೆ ಸಂದೇಹವಿಲ್ಲ. ಯಾರು ಯಾರು ಪಾಪಿಗಳಾಗುವರೋ ಅವರವರು ಸುಖಿಗಳಾಗುವರು.

" ನನ್ನ ಸೊಸೆ ಬಂಜೆಯಾಗಿದ್ದಳು. ಅವಳು ನನ್ನನ್ನು ಬಡಿದು, ಮಗ ನನ್ನು ಹೆತ್ತಳು. ಅವಳು ಸರ್ವಕುಲದ ಒಡತಿ. ನಾನು ಏಕಾಕಿನಿಯಾಗಿ ತೊರೆಯಲ್ಪಟ್ಟವಳು.

ಆಗ ಶಕ್ರನು ಆರನೆಯ ಗಾಹೆ ಹೇಳಿದನು :

" ನಾನು ಬದುಕಿದ್ದೇನೆ. ನಾನು ಸತ್ತಿಲ್ಲ. ನಿನಗಾಗಿಯೇ ಇಲ್ಲಿ ಬಂದಿದ್ದೇನೆ. ಯಾರು ನಿನ್ನನ್ನು ಬಡಿದು ಮಗನನ್ನು ಹೆತ್ತಳೋ ಅವಳನ್ನು ಮಗನೊಡನೆ ಭಸ್ಮಮಾಡುವೆನು."

ಇತರಳು ಅವನನ್ನು ಕೇಳಿ, " ಛೆ, ಏನು ಮಾತನಾಡುವೆ. ನನ್ನ ಮೊಮ್ಮಗ ಸಾಯದಂತೆ ಮಾಡುವೆನು " ಎಂದು ಏಳನೆಯ ಗಾಹೆ ಹೇಳಿದಳು :

" ಇದು ನಿನಗೆ ಒಪ್ಪಿದರೆ, ದೇವರಾಜ, ನೀನು ನನಗಾಗಿ ಇಲ್ಲಿ ಬಂದುದಾದರೆ, ನಾನೂ ಮಗನೂ ಸೊಸೆಯೂ ಮೊಮ್ಮಗನೂ ಸಮ್ಮೋದದಿಂದ ಮನೆಯಲ್ಲಿ ವಾಸಿಸುವುದಾಗಲಿ."

ಆಗ ಶಕ್ರನು ಅವಳಿಗೆ ಎಂಟನೆಯ ಗಾಹೆ ಹೇಳಿದನು :

" ನಿನಗೆ ಇದು ರುಚಿಸುವುದು, ಕಾತ್ಯಾಯನಿ. ಹತಳಾದರೂ ನೀನು ಧರ್ಮವನ್ನು ಬಿಡವೊಲ್ಲೆ. ನೀನೂ ಮಗನೂ ಸೊಸೆಯೂ ಮೊಮ್ಮಗನೂ ಸಮ್ಮೋದದಿಂದ ಮನೆಯಲ್ಲಿ ವಾಸಮಾಡಿರಿ. "

ಹೀಗೆಂದು ಹೇಳಿ, ಶಕ್ರನು ವಸ್ತ್ರಾಲಂಕಾರಗಳನ್ನು ತಾಳಿ, ತನ್ನ ಅನುಭಾವದಿಂದ ಆಕಾಶದಲ್ಲಿ ನಿಂತು, " ಕಾತ್ಯಾಯನಿ, ನೀನು ಹೆದರ

ಬೇಡ. ನಿನ್ನ ಮಗನೂ ಸೊಸೆಯೂ ನನ್ನ ಅನುಭಾವದಿಂದ ಬಂದು, ದಾರಿಯಲ್ಲಿ ಕ್ಷಮಿಸಲ್ಪಟ್ಟು, ನಿನ್ನನ್ನು ಒಡಗೊಂಡು ಹೋಗುವರು. ಅಪ್ರಮತ್ತಳಾಗಿ ವಾಸಿಸು" ಎಂದು ಹೇಳಿ ತನ್ನ ಸ್ಥಾನಕ್ಕೆ ಹೋದನು.

ಅವರು ಕೂಡ ಶಕ್ರನ ಅನುಭಾವದಿಂದ ಅವಳ ಗುಣಗಳನ್ನು ನೆನೆ ನೆನೆದು "ನಮ್ಮ ತಾಯಿಯೆಲ್ಲಿ?" ಎಂದು ಗ್ರಾಮಗಳಲ್ಲಿ ಜನರನ್ನು ಕೇಳುತ್ತ, "ಶ್ಮಶಾನದ ಕಡೆ ಹೋದಳು" ಎಂದುದನ್ನು ಕೇಳಿ," ಅಮ್ಮ! ಅಮ್ಮ!" ಎಂದು ಶ್ಮಶಾನದ ದಾರಿಯನ್ನು ನಡೆದು, ಅವಳನ್ನು ಕಂಡೊಡನೆ ಕಾಲಿಗೆ ಬಿದ್ದು, "ಅಮ್ಮ ನಮ್ಮ ದೋಷವನ್ನು ಕ್ಷಮಿಸು" ಎಂದು ಕ್ಷಮಿಸಲ್ಪಟ್ಟರು. ಅವಳೂ ಮೊಮ್ಮಗನನ್ನು ಕರಕೊಂಡಳು. ಹೀಗೆ ಸಮ್ಮೋದದಿಂದ ಮನೆಗೆ ಹೋಗಿ ಅಂದಿನಿಂದ ಎಲ್ಲರೂ ಒಟ್ಟಾಗಿ ವಾಸಿಸಿದರು.

"ಆ ಕಾತ್ಯಾಯನಿಯು ಸೊಸೆಯೊಡನೆ ಸಮ್ಮೋದದಿಂದ ಮನೆಯಲ್ಲಿ ವಾಸಿಸಿದಳು. ಶಕ್ರನಿಂದ ಒಪ್ಪಿಸಲ್ಪಟ್ಟು ಮಗನೂ ಮೊಮ್ಮಗಳೂ ಅವನ ಸೇವೆ ಮಾಡಿದರು."

ಇದು ಅಭಿಸಂಬುದ್ಧ ಗಾಹೆ.



**ಉರಗ ಜಾತಕ (೩೫೪)** [ಪುಟ ೭೦

(Copyright: Archæological Survey of India)

